ಗೀತಾಕುಸುಮಮಂಜರಿ-ಗ್ರಂಥಮಾಲೆ

ಗ್ರಂಥ ೨

# ಗೀತಾ ಸಂದೇಶ



ಗ್ರಂಥಕರ್ತರು ಮತ್ತು ಪ್ರಕಾಶಕರು

**ಆಲೂರ ವೆಂಕಟರಾಯರು,** ಬಿ. ಎ. ಎಲ್‌ಎಲ್. ಬಿ.

ಧಾರವಾಡ

೭-೧೦-೩೫

(ವಿಜಯದಶಮಿ)



ಬೆಲೆ ೧-೪-೦

(ವರ್ಷದಲ್ಲಿ೪೫೦ ಪುಟ) **ಗೀತಾ ಕುಸುಮಮಂಜರಿ** ವಾರ್ಷಿಕ ಚಂದಾ
೧೫೦ ಪುಟಗಳ ಗ್ರಂಥಮಾಲೆ ಅಂಚೆ ವೆಚ್ಚ ಸಹಿತ)
ಮೂರು ಗ್ರಂಥಗಳು

# ಉದ್ದೇಶ ಪತ್ರಿಕೆ

ಚಂದಾದಾರರಿಗೆ ೪-೮-೦
ಪೋಷಕರಿಗೆ ೧೦-೦-೦

ಗ್ರಂಥಕರ್ತರು:- **ಆಲೂರ ವೆಂಕಟರಾಯರು, ಧಾರವಾಡ**

ಇದೊಂದು ನಾವು, ಗೀತಾದೇವಿಯ ಗರ್ಭಗುಡಿಯಲ್ಲಿ ಇಡಬೇಕೆಂದಿರುವ ನಂದಾ (ನೊಂದದ) ದೀಪವು. ಗೀತಾದೇವಿಯ ಮುಂದೆ ಪುರಾತನಕಾಲದಿಂದಲೂ ನೂರಾರು ಪಂಡಿತರು ಅನೇಕ ನಂದಾದೀಪಗಳನ್ನು ಹಚ್ಚಿಟ್ಟಿರಲು, ನಮ್ಮೀ ಮಿಣಿಮಿಣಿ ಉರಿಯುವ ದೀಪದ ಆವಶ್ಯಕತೆಯೇನೆಂದು ಕೇಳಬಹುದು. ನಂದಾದೀಪವನ್ನಿಡುವುದು ಮುಖ್ಯತಃ ನಮಗೆ ಪುಣ್ಯ ಒದಗಲಿ ಎಂದು. ನಮ್ಮ ಹೃದಯದಲ್ಲಿ-ದೇವರ ಮೂರ್ತಿಯ ಮೇಲಲ್ಲ- ಕೆಲಮಟ್ಟಿಗೆ ಪ್ರಕಾಶ ಬೀಳಲಿ ಎಂದು. ಆನುಷಂಗಿಕವಾಗಿ, ದೇವಿಯ ಮೂರ್ತಿಯ ಮೇಲೆ ತುಸು ಬೆಳಕು ಬಿದ್ದರೂ ಬೀಳಲಿ.

ಈ ಗ್ರಂಥಗಳನ್ನು ಬರೆಯುವುದರಲ್ಲಿ ನಮ್ಮ ಉದ್ದೇಶವು ಗೀತೆಗೆ ತೀರ ಹೊಸದೊಂದು ಅರ್ಥವನ್ನು ಹಚ್ಚುವುದಿರುವುದಿಲ್ಲವೆಂಬುದನ್ನು ನಾವು ಮುಂಚೆ ಸ್ಪಷ್ಟವಾಗಿ ಹೇಳಿಬಿಡುತ್ತೇವೆ. ಪ್ರತಿಯೊಬ್ಬನಿಗೆ ನವೀನವಾಗಿ ವಿಚಾರ ಮಾಡುವುದಕ್ಕೆ ಸ್ವಾತಂತ್ರ್ಯವೇನೋ ಇದ್ದೇ ಇರುತ್ತದೆ. ಹಾಗೆ ಆತನು ಮಾಡಲೂ ಬೇಕು. ಆದರೆ ಸ್ವಾತಂತ್ರ್ಯವು ಬೇರೆ, ಅಧಿಕಾರವು ಬೇರೆ. ಅನೇಕ ಶಾಸ್ತ್ರಗಳನ್ನೋದಿ ಶ್ರೀಮದ್ಭಗವದ್ಗೀತೆಯನ್ನು ಅನೇಕ ತಪಗಳ ವರೆಗೆ ಅಭ್ಯಾಸಮಾಡಿದರೂ ಆ ತರಹದ ಅಧಿಕಾರವು ಪೂರ್ವಜನ್ಮದ ಪುಣ್ಯವಿಲ್ಲದೆ ಪ್ರಾಪ್ತವಾಗಲಾರದು. ಅಂದಬಳಿಕ ಕೇವಲ ಸ್ವಂತ ಮನಸ್ಸಿನ ಸಮಾಧಾನಕ್ಕೋಸ್ಕರ ಅನೇಕ ವರ್ಷಗಳಿಂದ ಅಭ್ಯಾಸ ಮಾಡುತ್ತ ಬಂದಿದ್ದರೂ ಇನ್ನೂ ವರೆಗೆ ತೃಪ್ತಿಹೊಂದದ ನಮ್ಮಂಥ ಪಾಮರರಿಗೆ, ಹಾಗೆ ತೀರ ಸ್ವತಂತ್ರವಾದ ಗ್ರಂಥವನ್ನು ಬರೆಯುವ ಅಧಿ

ಕಾರವೆಲ್ಲಿ ? ಶ್ರೀಶಂಕರ ರಾಮಾನುಜ ಮಧ್ವ ಮುಂತಾದವರ ಮತ್ತು ಆಧುನಿಕ ಪಂಡಿತರ– ವಿಶೇಷತಃ ಶ್ರೀ ಮಧ್ವಾಚಾರ್ಯರ ಗ್ರಂಥಗಳನ್ನು ಮೂಲಾಧಾರವಾಗಿಟ್ಟುಕೊಂಡು ಈ ಗ್ರಂಥಗಳನ್ನು ಬರೆದಿರುವೆವು.

**ಆದರೆ, ನಮ್ಮ ವಿವೇಚನಾಪದ್ಧತಿಯಲ್ಲಿ ಬಲುಮಟ್ಟಿಗೆ ಸ್ವಾವಲಂಬನವಿದೆ, ರಚನಾಶೈಲಿಯಲ್ಲಿ ವೈಶಿಷ್ಟ್ಯವಿದೆ.** ಪಾಂಡಿತ್ಯಪ್ರದರ್ಶನವೂ ನಮ್ಮ ಉದ್ದೇಶವಲ್ಲ, ಅಥವಾ ಪಾಮರರಂಜನವೂ ನಮ್ಮ ಉದ್ದೇಶವಲ್ಲ. ವಿವಿಧ ದೃಷ್ಟಿಯಿಂದ ಗ್ರಂಥಗಳನ್ನು ಬರೆದು ಗೀತಾರಸವನ್ನು ಪಾನಮಾಡಿಸುವುದೇ ನಮ್ಮ ಉದ್ದೇಶ. 'ಸಂಕ್ಷೇಪ ವಿಸ್ತರಾಭ್ಯಾಂ ಪ್ರವದಂತಿ ಮನೀಷಿಣಃ' ಎಂಬಂತೆ ನಾವು ಗೀತೆಯ ವಿಷಯವಾಗಿ ಮುಂಚೆ ಸಂಕ್ಷೇಪದಿಂದ ಹೇಳಿ, ವಾಚಕರಿಗೆ ತಿಳಿದುಕೊಳ್ಳುವ ಕುತೂಹಲವು ಹೆಚ್ಚಾಗುತ್ತ ಹೋದಂತೆ ಹೊಸ ವಿಷಯಗಳನ್ನೊಳಗೊಂಡ ಗ್ರಂಥಗಳನ್ನು ಬರೆದಿರುವೆವು. ಇದರಿಂದ, ಇವು ಭಿನ್ನ ಭಿನ್ನ ತರಗತಿಯ, ಭಿನ್ನ ಭಿನ್ನ ಅಭಿರುಚಿಯ ಮತ್ತು ಭಿನ್ನ ಭಿನ್ನ ಪಂಥಗಳ ಜನರಿಗೆಲ್ಲರಿಗೂ ಉಪಯುಕ್ತವಾಗದೆ ಇರವು.

ಇವೆಲ್ಲ ಗ್ರಂಥಗಳು ಬಹುಶಃ ಹೊಳವು ಹಾಕಲ್ಪಟ್ಟು ಸಿದ್ಧವಾಗಿವೆ; ತೀದಿ ಪೊಳವು ಕೊಡುವ ಕೆಲಸವಷ್ಟೆ ಉಳಿದಿದೆ. ನಮ್ಮಲ್ಲಿ ಹಣದ ಶಕ್ತಿಯಿದ್ದರೆ, ಇವೆಲ್ಲವನ್ನೂ ಒಮ್ಮೆಲೆ ಮುದ್ರಿಸಬಹುದಾಗಿತ್ತು. ಅದರ ಅಭಾವದ ಮೂಲಕವೇ ಅವುಗಳಿಗೆ ಈ ಗ್ರಂಥಮಾಲೆಯ ರೂಪ. ಈ ಗ್ರಂಥಮಾಲೆಯನ್ನು ನಮ್ಮಿಂದ ೪-೫ ವರ್ಷಗಳಲ್ಲಿ ಪೂರ್ಣ ಮಾಡಿಸಿಕೊಳ್ಳುವುದು ಬಿಡುವುದು, ಇನ್ನು, ಕನ್ನಡಿಗರ ಉದಾರಾಶ್ರಯವನ್ನೇ ಅವಲಂಬಿಸಿದೆ.

ನವರಾತ್ರಿಯಲ್ಲಿ ದೇವರಿಗೆ ವಿವಿಧ ರೂಪಗಳನ್ನು ಕೊಟ್ಟು ಭಕ್ತರು ಆನಂದಪಡುವಂತೆ, ನಮಗೂ, ಗೀತಾದೇವಿಗೆ ವಿವಿಧರೂಪಗಳನ್ನು ಕೊಟ್ಟು ಆನಂದ ಪಡುವುದಕ್ಕೆ ಅವಕಾಶವನ್ನು ಕೊಟ್ಟು ತಾವೂ ಪುಣ್ಯಭಾಗಿಗಳಾಗಬೇಕೆಂದು ಕನ್ನಡಿಗರಿಗೆ ನಮ್ಮ ಪ್ರಾರ್ಥನೆ.

ಸಾಧನಕೇರಿ, ಧಾರವಾಡ<br>ತಾ, ೨೮–೯–೩೫ } ಆಲೂರ ವೆಂಕಟರಾಯರು

# ಮೊದಲು ಓದತಕ್ಕ ಮಾತುಗಳು

ವಾಚಕರು ಈ ಗ್ರಂಥವನ್ನು ಯಾವ ದೃಷ್ಟಿಯಿಂದ ಓದಬೇಕೆಂಬುದನ್ನು ಹೇಳುವದಕ್ಕೋಸ್ಕರ ಈ ಪ್ರಸ್ತಾವನೆ.

ಇದು ನಮ್ಮ ಗೀತಾ ಕುಸುಮಮಂಜರಿ, ಗ್ರಂಥಮಾಲೆಯ ಎರಡನೆಯ ಕುಸುಮವು. ಇದು ಸರಳವಾದ ಗದ್ಯದಲ್ಲಿ ಬರೆದ ಪುಸ್ತಕ. ಇದನ್ನು ಬರೆಯುವುದರಲ್ಲಿ ನಮ್ಮ ಉದ್ದೇಶಗಳು ಯಾವುವೆಂದರೆ:—

೧ ಸಮಗ್ರ ಗೀತೆಯ ಸಾರವನ್ನು ಅಥವಾ ಸಂದೇಶವನ್ನು ತ್ರಿಮತಸ್ಥರಿಗೂ ಎಲ್ಲರಿಗೂ ಬಹುಶಃ ಮಾನ್ಯವಾಗುವಂತೆ ಕೊಡುವುದು. ಅದಕ್ಕನುಸಾರವಾಗಿ "ಸರ್ವವೂ ಭಗವದಧೀನವಾಗಿರುವುದರಿಂದ ಸ್ವವಿಹಿತವೃತ್ತಿಯಿಂದಲೂ ಭಕ್ತಿಯಿಂದಲೂ ಭಗವದಾರಾಧನೆ ಮಾಡುವುದೇ ಪರಮಧರ್ಮವು, ತದ್ವಿರುದ್ಧವಾದುದೆಲ್ಲವೂ ಅಧರ್ಮವು" ಎಂಬ ಒಂದು ವಾಕ್ಯದಲ್ಲಿ ಆ ಸಂದೇಶವನ್ನು ಕೊಟ್ಟಿರುವೆವು. ಈ ಇಡೀ ಗ್ರಂಥವು ಆ ವಾಕ್ಯದ ವಿಸ್ತಾರವಾದ ವಿವರಣೆಯು. "ನಮ್ಮ ಜನರ ಲಕ್ಷ್ಯವು ಇಷ್ಟು ದಿವಸ ಭೇದಗಳ ಕಡೆಗೆ ವಿಶೇಷವಾಗಿ ಹೋಗಿದೆ. ಅದನ್ನು ಸಾಮಾನ್ಯಗಳ ಕಡೆಗೆ ತಿರುಗಿಸುವುದು ನಮ್ಮ ಉದ್ದೇಶ" (ಗೀ. ಪ್ರಕಾಶ ಭಾಗ ೫ ಪು. ೩೫೭ ) ವೆಂದು ಹೇಳಿದ್ದೆವು. ಆ ದಿಶೆಯಲ್ಲಿ ನಮ್ಮ ಪ್ರಯತ್ನ.

೨ "ಮತಾಚಾರ್ಯರ ತತ್ವಗಳನ್ನು ಆಧುನಿಕ ರೀತಿಯಲ್ಲಿ ಮಂಡಿಸುವುದು ಈಗ ಆಗಬೇಕಾದ ಮಹತ್ವದ ಸುಧಾರಣೆ (ಗೀ. ಪ್ರ. ಭಾಗ. ೫ ಪು. ೩೬೨) ಎಂಬುದಾಗಿ ಹೇಳಿದ್ದೇವಷ್ಟೆ. ಅದಕ್ಕನುಸಾರವಾಗಿ, ಶ್ರೀಮಧ್ವಾಚಾರ್ಯರ ತತ್ವಗಳನ್ನು ಹೊಸರೀತಿಯಲ್ಲಿ ಇಡಲೆತ್ನಿಸಿರುವೆವು. ನಾವು ಮೇಲೆ ಕೊಟ್ಟ ಗೀತಾಸಂದೇಶದ ವಾಕ್ಯವು ಶ್ರೀಮಧ್ವಾಚಾರ್ಯರ ಗೀತಾತಾತ್ಪರ್ಯನಿರ್ಣಯ ಗ್ರಂಥದಲ್ಲಿಯ ಒಂದು ವಾಕ್ಯದ ಮುಖ್ಯ ಭಾಗವು. ಶ್ರೀಮಧ್ವಾಚಾರ್ಯರು ತೋರಿಸಿದ ಮಾರ್ಗದಲ್ಲಿ— ಆದರೂ ಸ್ವತಂತ್ರವಾಗಿ ಅಭ್ಯಾಸಮಾಡಿ, ಆ ವಾಕ್ಯದೊಳಗೆ ಅಡಕವಾಗಿರುವ ಪ್ರಮೇಯಗಳನ್ನು ಪುಷ್ಟಿಗೊಳಿಸಿರುವೆವು. ಇದರಿಂದ, ಸ್ವತಂತ್ರ ಅಭ್ಯಾಸಕ್ಕೆ ಎಷ್ಟು ಅನುವು ಇರುತ್ತದೆಂಬುದು ಗೊತ್ತಾಗುವುದು.

೩. "ನಮ್ಮ ಧರ್ಮದ, ಸಂಸ್ಕೃತಿಯ, ತತ್ತ್ವಜ್ಞಾನದ ತತ್ತ್ವಗಳು ಗೀತೆಯೆಂಬ ಕಿರಿದಾದ ಕರಂಡಕದಲ್ಲಿ, ಸಣ್ಣದಾದ ಸಂಪುಷ್ಟದಲ್ಲಿ ಸುರಕ್ಷಿತವಾಗಿ ಕಾಯ್ದಿಡಲ್ಪಟ್ಟಿವೆ" (ಗೀ. ಪ್ರ. ಭಾಗ ೧ ಪು. ೬) ಎಂಬುದನ್ನು ಕೆಲಮಟ್ಟಿಗೆ ವಿವರಿಸುವುದು.

ಈ ಉದ್ದೇಶಗಳ ಸಾಧನೆಗಾಗಿ ೧೬ ಪ್ರಕರಣಗಳನ್ನು ಬರೆದಿರುವೆವು. ೧ನೆಯ ಪ್ರಕರಣದಲ್ಲಿ ಚಿಕ್ಕದೊಂದು ಹೊಸ ಕಲ್ಪನೆಯಿದೆ. ಅದೇನೆಂದರೆ, ಗೀತೆಯ ಶಬ್ದಗಳಲ್ಲಿ ಗೀತೆಯ ಮಹಿಮೆಯನ್ನು ವರ್ಣಿಸುವುದು. ೨ನೆಯದರಲ್ಲಿಯ ಕಲ್ಪನೆಯೆಂದರೆ ಗೀತೆಯನ್ನು ಕರ್ನಾಟಕ ಶಿಲ್ಪಕಲೆಯ ಕಟ್ಟಡಕ್ಕೆ ಹೋಲಿಸಿ, ಸಂದೇಶವು ಅದರ ನಡುಗುಡಿಯು ಹೇಗೆಂಬುದನ್ನು ಹೇಳಿರುವುದು. ೩ನೆಯದರಲ್ಲಿ, ಆ ಸಂದೇಶವು ಯಾವುದೆಂಬುದನ್ನು ಹೇಳಿ ೪ನೆಯದರಲ್ಲಿ, ಈ ಗ್ರಂಥದಲ್ಲಿ ಗೀತೆಯ ನೂರಾರು ಶ್ಲೋಕಗಳ ಉಲ್ಲೇಖವಷ್ಟೇ ಏಕೆ ಬಂದಿರುವುದೆಂಬುದನ್ನು ಹೇಳಿರುವೆವು. ೫ನೆಯದರಲ್ಲಿ ತೀರ ಹೊಸದೊಂದು ಕಲ್ಪನೆಯಿದೆ. ಅದೇನೆಂದರೆ ವೇದಾಂತ ಶಾಸ್ತ್ರವನ್ನು ಭೂಮಿತಿಶಾಸ್ತ್ರಕ್ಕೆ ಹೋಲಿಸಿ ಗೀತೆಯ ಗೃಹಿತ ತತ್ತ್ವಗಳನ್ನು ಕೊಟ್ಟಿರುವುದು. ೬ರಿಂದ ೧೩ರ ವರೆಗಿನ ಪ್ರಕರಣಗಳಲ್ಲಿ ಗೀತಾಸಂದೇಶವೆಂಬುದಾಗಿ ಕೊಟ್ಟಿರುವ ವಾಕ್ಯದಲ್ಲಿ ಅಡಕವಾಗಿರುವ ಪ್ರಮೇಯಗಳ ವಿವೇಚನೆಯು ಗೀತೆಯ ಆಧಾರದಿಂದಲೇ ಮಾಡಲಾಗಿದೆ. ೧೪ನೆಯದರಲ್ಲಿ ಗೀತೆಯ ಸನಾತನತತ್ತ್ವಗಳ ವಿವರಣೆಯಿದೆ. ೧೫ನೆಯದರಲ್ಲಿಯ ಹೊಸ ಕಲ್ಪನೆಯೆಂದರೆ ಅರಿಸ್ಟಾಟಲ್‌ನ ಸುವರ್ಣಮಧ್ಯ(Golden mean)ದ ತತ್ತ್ವವನ್ನು ಗೀತೆಗೆ ಹಚ್ಚಿ ತೋರಿಸಲೆತ್ನಿಸಿದುದು. ೧೬ನೆಯದರಲ್ಲಿ ಉಪಸಂಹಾರವಿದೆ.

ಹೀಗೆ, ನಾವು ಈ ಗ್ರಂಥದಲ್ಲಿ ಹೆಜ್ಜೆಹೆಜ್ಜೆಗೆ ಹೊಸ ಕಲ್ಪನೆಗಳನ್ನಿಟ್ಟಿರುವೆವು. ದಾಸರಪದಗಳು, ಅನುಭವಾಮೃತ, ಶೂನ್ಯಸಂಪಾದನೆ, ಕೈವಲ್ಯ ಕಲ್ಪವಲ್ಲರಿ, ಬಸವಣ್ಣನವರ ವಚನಗಳು ಮುಂತಾದವುಗಳೊಳಗಿನ ಅವತರಣಿಕೆಗಳಿಂದ ಗ್ರಂಥವನ್ನು ಓದಲಿಕ್ಕೆ ರುಚಿಕಟ್ಟಾಗಿ ಮಾಡಿರುವೆವು. ನಮ್ಮ ಪ್ರಯತ್ನದ ಯುಕ್ತಾಯುಕ್ತತೆಯನ್ನು ನಿರ್ಣಯಿಸುವ ಕೆಲಸವು ನಮ್ಮದಲ್ಲ, ವಾಚಕರದು. ಅದು ಏನೇ ಇರಲಿ, ಇದರೊಳಗಿನ

ತಪ್ಪುಗಳಿಗೆ ನಾವೊಬ್ಬರೇ ಹೊಣೆಗಾರರು; ಒಪ್ಪುಗಳ ಶ್ರೇಯವು ನಾವು ಯಾವ ಅನೇಕ ಪಂಡಿತರ ಗ್ರಂಥಗಳನ್ನೋದಿ ಇದನ್ನು ಬರೆಯುವುದಕ್ಕೆ ಪ್ರವೃತ್ತರಾದೆವೋ ಆ ಮಹಾತ್ಮರಿಗೆ,ಎಂಬುದನ್ನು ಮಾತ್ರ ಹೇಳದೆ ಇರಲಾರೆವು.

ಹಳೆಯದು ನಿರ್ಜೀವವು.ಹೊಸದು ನಿರ್ಧ್ಯೇಯವು. ಹಳಬರು ನಿಜವಾದ ಮುತ್ತುಗಳನ್ನು ಪೀತಾಂಬರದ ಚಿಂದಿಗಳಲ್ಲಿಟ್ಟು ಮಾರುವವರು; ಹೊಸಬರು ದ್ವೀಪಾಂತರದಿಂದ ಬಂದ ನೀರ ಮುತ್ತುಗಳನ್ನು ಮಿನುಗುವ ಡಬ್ಬಿಗಳಲ್ಲಿಟ್ಟು ತಮ್ಮದೆಂದು ಮಾರುವವರು. ಹೊಸಬರಲ್ಲಿ ಜೀವವಿದೆ, ಶಕ್ತಿಯಿದೆ, ವೇಗವಿದೆ; ಹಳಬರ ಹತ್ತಿರ ಸತ್ವವಿದೆ, ತಥ್ಯವಿದೆ,ಶ್ರದ್ಧೆಯಿದೆ. ಹೊಸದು ಬಾಲಾಗಸಿಯಿಲ್ಲದೆ ಗೋತೀತಿನ್ನುತ್ತಿರುವ ಗಾಳಿಪಟವಾದರೆ, ಹಳೆಯದು ದಾರ ಹರಿದು ಕಡಕೊಂಡು ಬಿದ್ದ ಗಾಳಿಪಟವು. ಆದ ಕಾರಣ, ಮೂರನೆಯದೊಂದು ಮಧ್ಯಮವರ್ಗವು ಹುಟ್ಟಬೇಕೆಂದು ನಮ್ಮ ಇಚ್ಛೆ. ಆದರೆ, ಎಷ್ಟೋ ಪುರುಷರುಗಳಿಂದ ವಿಚಾರ ಮಾಡುತ್ತಿದ್ದರೂ, ನಮಗೆ ತಿಳಿದ ಸಂಗತಿ ಬಂದಿದ್ದರೆ (ಅದೂ ಸರಿಯಾಗಿ ತಿಳಿದಿದೆಯೋ ಇಲ್ಲವೋ ಎಂಬುದು ಸಂಶಯ) ತಿಳಿಯದಿದ್ದ ಸಂಗತಿಗಳು ನೂರಾರು ಇರುವಾಗ ನಾವು ಏನು ಮಾಡಬಲ್ಲೆವು? ಪರಸ್ಪರವಿಚಾರವಿನಿಮಯಕ್ಕೆ ಅನುವು ಮಾಡಿಕೊಡುವುದಷ್ಟೆ ಈಗಿನ ನಮ್ಮ ಉದ್ದೇಶ. ಭೋರ್ಗರೆದು ಬರುತ್ತಿರುವ ಹೊಸ ವಿಚಾರಗಳ ವೇಗವನ್ನು ತಡೆಗಟ್ಟುವುದಕ್ಕಾಗಲಿ ತಿರುಗಿಸುವುದಕ್ಕಾಗಲಿ ನಮ್ಮಲ್ಲಿ ಸಾಮರ್ಥ್ಯವಿಲ್ಲ. ಅಲ್ಲದೆ, ಸನಾತನ ಸಂಸ್ಕೃತಿಯ ಮೇಲೆ ಮುಚ್ಚಿದ ಬೂದಿಯನ್ನು ಹಾರಿಸುವುದಕ್ಕಾಗಿಯೇ ಈ ಹೊಸ ಬಿರುಗಾಳಿಯನ್ನು ಸರ್ವಮಂಗಲನಾದ ಪರಮಾತ್ಮನು ಕಳುಹಿಸಿರುವನೆಂದು ನಮ್ಮ ವಿಶ್ವಾಸ. ಇರಲಿ; ಈ ಗ್ರಂಥವನ್ನೋದಿ ಯಾರೂ ತಲೆತೂಗದಿದ್ದರೂ ಕೆಲವರಾದರೂ ತಲೆತುರಿಸಿಕೊಳ್ಳಲು ಹತ್ತಿದರೆ ನಾವು ಕೃತಾರ್ಥರಾದೆವೆಂದು ಭಾವಿಸುವೆವು.ನಮಗಿಂತ ಹೆಚ್ಚಿನ ಅಧಿಕಾರಿಗಳು ಈ ದಿಶೆಯಲ್ಲಿ ಹೆಚ್ಚಿಗೆ ಪ್ರಯತ್ನಮಾಡುವುದು ಹಿಂದೂಸಂಘಟನೆಯ ನಿಜವಾದ ಮಾರ್ಗವೆಂದು ನಮ್ಮ ಅಭಿಪ್ರಾಯ.

ಕೊನೆಗೆ, ಕರ್ನಾಟಕವು ಜಗತ್ತಿಗೆ ಬಹಳ ಹಿಂದೆಯೇ ಡಂಗುರ

ಹೊಡೆದು ಸಾರಿದ, ಈ ಕೆಳಗಿನ ಶ್ಲೋಕದಲ್ಲಿ ಅಡಕವಾಗಿರುವ ಪ್ರಸ್ತುತ ವಾರ್ಷ್ಯದಿಂದೊಡಗೂಡಿದ ಪರಮತ ಸಹಿಷ್ಣುತೆಯೇ ನಿಜವಾದ ಸಹಿಷ್ಣುತೆಯೆಂಬ ವಿಚಾರವು ಸರ್ವತ್ರ ಹರಡಲೆಂದೂ ಅದು ನವಯುಗದ ಮಹಾವಾಕ್ಯವಾಗಲೆಂದೂ ಹಾರೈಸುತ್ತೇನೆ.

ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ ।
ಬೌದ್ಧಾಃ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ ॥
ಅರ್ಹನ್ನಿತ್ಯಥ ಜೈನ ಶಾಸನರತಾಃ ಕರ್ಮೇತಿ ಮೀಮಾಂಸಕಾಃ ।
ಸೋಽಯಂ ನೋ ವಿದಧಾತು ವಾಂಛಿತಫಲಂ ಶ್ರೀಕೇಶವಃ ಸರ್ವದಾ ॥

(ಬೇಲೂರಿನ ಶಿಲಾಶಾಸನ)

ತಾ:– ' ಶೈವರು ಶಿವನೆಂದೂ ವೇದಾಂತಿಗಳು ಬ್ರಹ್ಮನೆಂದೂ ಬೌದ್ಧರು ಬುದ್ಧನೆಂದೂ ಪ್ರಮಾಣಪಟುಗಳಾದ ನೈಯಾಯಿಕರು ಕರ್ತನೆಂದೂ ಜೈನರು ಅರ್ಹತನೆಂದೂ ಮೀಮಾಂಸಕರು ಕರ್ಮವೆಂದೂ ಪೂಜಿಸಲ್ಪಡುವ ಕೇಶವನು ನಮಗೆ ಸದಾ ವಾಂಛಿತಫಲವನ್ನೀಯಲಿ.''

ನಮಗೆ ನೆರವಾದ ಧಾರವಾಡದ ಶ್ರೀ. ತಟ್ಟಿ ಶ್ಯಾಮರಾವ, ಬಿ. ಎ. ಶ್ರೀ. ಕವಿಭೂಷಣ ಬೆಟಗೇರಿ, ಶ್ರೀ. ರಾಘವೇಂದ್ರರಾವ ಮುತಾಲೀಕ ದೇಸಾಯಿ, ಎಂ. ಎಚಿ. ಶ್ರೀ. ಕೇಶವರಾವ ಭಬ್ಬಿ ಶ್ರೀ. ಕೊಪ್ಪ ವಕೀಲ ಇವರಿಗೂ ಬೆಳಗಾಂವಿಯ ಡಾ. ಪವಣೂರ ಇವರಿಗೂ ಮಂಗಳೂರಿನ ವೆ॥ ಉ. ಸೀತಾರಾಮಾಚಾರ್ಯರಿಗೂ, ಬಾಗಲಕೋಟೆಯ ಶ್ರೀ. ಕೋಟಿ ಶ್ರೀನಿವಾಸರಾವ ಮತ್ತು ಶ್ರೀ. ಮಂಗಳವೇಡೆ ಶ್ರೀನಿವಾಸರಾಯರಿಗೂ, ಸಾಸನೂರಿನ ಶ್ರೀ. ಮುದಿವಾಳಪ್ಪನವರಿಗೂ ಮತ್ತು ಉತ್ಸಾಹದಿಂದ ನೆರವಾಗುತ್ತಿರುವ ನಮ್ಮ ಏಜಂಟರಾದ ಶ್ರೀ. ವಿ. ಗಣಪತಿಶಾಸ್ತ್ರಿ ಮಂಗಳೂರ ಇವರಿಗೂ ಮತ್ತು ಮುದ್ದಾಗಿ ಮುದ್ರಣ ಮಾಡಿದ ಮೋಹನ ಪ್ರೆಸ್ಸಿನವರಿಗೂ ವಂದನೆಗಳು.

ಸಾಧನಕೇರಿ, ಧಾರವಾಡ<br>(ಆಶ್ವೀಜ ಪ್ರತಿಪದೆ)<br>ತಾ॥ ೨೮-೯-೧೯೩೫

ಆಲೂರ ವೆಂಕಟರಾಯರು

# ವಿಷಯಾನುಕ್ರಮಣಿಕೆ

# ಕೆಲವು ಮುದ್ರಣದೋಷಗಳು

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೧ | ೧೭ | ಪ್ರಸಾಸ | ಪ್ರಸಾದ |
| ೩೨ | ೨೬ | ನಾವು | ನಾನು |
| ೩೪ | ೨೭ | ಭಾವಾದೀತೋ | ಭಾಸವಾದೀತೋ |
| ೩೭ | ೨೫ | ನಾನು | ನಾನಾ |
| ,, | ೨೬ | ಜೀವನಾ | ಜೀವನು |
| ೪೭ | ೧೬ | ಉಚ್ಛ್ರಂಖಲವಾದ | ಉಚ್ಛೃಂಖಲವಾದ |
| ೯೩ | ೯–೧೦ | ವಿ। ಚಾರವವೇ | ವಿ। ಚಾರವೇ |
| ೯೪ | ೭ | ಮೂಕುತಿಗೊಡವೆ | ಮುಕುತಿಗೊಡವೆ |
| ೯೮ | ೨೧ | ಮಾಡಿದವರೂ | ಮಾಡದಿದ್ದವರೂ |
| ೧೧೯ | ೨೮ | ಪದ್ಧತಿಯು ಅದು | ಪದ್ಧತಿಯು ಅದು. |
| ೧೨೬ | ೧೩ | ದರ್ಶನವನ್ನು | ಕರ್ಶನವನ್ನು |
| ೧೨೯ | ೨ | ಬಿಸಿಲು ದೊರೆಯುಂದವಲಿ | ಬಿಸಿಲುದೊರೆಯುಂದದಲಿ |
| ೧೩೦ | ೬ | ಸಾಧನವವೆ | ಸಾಧನವ |
| ೧೩೧ | ೩೮ | ಜಲಪೊಳಬರ್ಗೆ | ಜಲಪೊಳಿಬರ್ಗೆ |
| ೧೩೩ | ೪ | ಪಥಾಕ | ಪತಾಕ |
| ,, | ೨೧ | ತಿಳಿಯುದವರೆನ್ನು | ತಿಳಿಯುದವರನ್ನು |
| ೧೩೪ | ೨೪ | ಮುಧ್ವುಬಂದುವು | ಮುಧ್ಯುಬಂದುವು |
| ೧೩೫ | ೧೦ | ಅರದ | ಆದರ |
| ೧೩೬ | ೨೦ | ಮುಸ್ಸರಿಯು | ಮುಪ್ಪರಿಯು |

# ಗೀತಾ ಸಂದೇಶ

## ೧ನೆಯ ಪ್ರಕರಣ

## ಗೀತೆಯಲ್ಲಿ ಗೀತೆಯ ಮಹಿಮೆ

**ಇದು ಪುಣ್ಯಕಥೆ, ಲೋಕಕಿದೆ ಮುಕುತಿ ಪಥ ।**
**ಇದ ಕೇಳುವವನೆ ಕೃತಾರ್ಥ ।**
**ಇದು ಸರ್ವಸಾಧನ, ವಿಧುಗಳಿಗೆ ಸಮ್ಮತ ।**
**ಮುದವ ನೀವುದು ಕೇಳ್ವ ಜನಕೆ ॥**

**—ವಾದಿರಾಜ**

ಶ್ರೀಮದ್ಭಗವದ್ಗೀತೆಯು ವಾಸುದೇವಾರ್ಜುನರ ಸಂವಾದರೂಪವಾದುದು. ಇದು ಅದ್ಭುತವೂ ರೋಮಾಂಚಜನಕವೂ ಆದ ಸಂಭಾಷಣವು. ಯೋಗೇಶ್ವರನಾದ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸಿದ ಈ ಗುಹ್ಯವಾದ ಯೋಗವು ಶ್ರೀವೇದವ್ಯಾಸರ ಪ್ರಸಾದದಿಂದ ಸಂಜಯನಿಗೆ ಪ್ರತ್ಯಕ್ಷವಾಗಿ ಕೇಳಲಿಕ್ಕೆ ಸಿಕ್ಕಿತು. ಏಕೆಂದರೆ, ಸಂಜಯನು ಸ್ವತಃ ಕುರುಕ್ಷೇತ್ರದ ರಣಾಂಗಣದಲ್ಲಿ ಇಲ್ಲದಿದ್ದರೂ, ಅಲ್ಲಿ ನಡೆಯುವ ಯುದ್ಧದ ಸಮಾಚಾರಗಳೆಲ್ಲವೂ ಆತನಿಗೆ ಗೊತ್ತಾಗುವಂತೆ ವ್ಯಾಸರು ಸಂಜಯನಿಗೆ ದಿವ್ಯದೃಷ್ಟಿಯನ್ನು ದಯಪಾಲಿಸಿದ್ದರು. ಸಂಜಯನ ಕಿವಿಗೆ ಬಿದ್ದ ಕೃಷ್ಣನ ಉಪದೇಶವು ಪುನಃ ಆ ವ್ಯಾಸರ ಪ್ರಸಾಸದಿಂದಲೇ ಲೋಕಕ್ಕೆ ದೊರೆತಿರುವುದು. ಏಕೆಂದರೆ, ವ್ಯಾಸರು ಮಹಾಭಾರತವನ್ನು ರಚಿಸಿ, ಅದರಲ್ಲಿ ಆ ಗೀತೋಪದೇಶವನ್ನು ಸೇರಿಸಿರುವರು. ಕೇಶವಾರ್ಜುನರ ಈ ಅದ್ಭುತವಾದ ಮತ್ತು ಪುಣ್ಯಪ್ರದವಾದ ಸಂವಾದವು ನೆನೆನೆನೆಸಿದಂತೆ, ಮನಸ್ಸಿಗೆ ಹೆಚ್ಚು ಹೆಚ್ಚು ಹರುಷವನ್ನು ಕೊಡುತ್ತದೆ. ಅರ್ಜುನನಿಗೆ ಶ್ರೀಕೃಷ್ಣನು ತೋರಿಸಿದ ವಿಶ್ವರೂಪವಂತೂ ಅತ್ಯಂತ ಅದ್ಭುತವಾದುದು. ಅದನ್ನು

ನೆನೆಸಿದರೆ ಮನಸ್ಸಿಗೆ ಮಹಾವಿಸ್ಮಯವುಂಟಾಗುತ್ತದೆ ಮತ್ತು ಅತಿಶಯ ವಾದ ಆನಂದವುಂಟಾಗುತ್ತದೆ. ಯೋಗೀಶ್ವರನಾದ ಶ್ರೀಕೃಷ್ಣನೂ ಧನುರ್ಧಾರಿಯಾದ ಪಾರ್ಥನೂ ಇರುವಲ್ಲೆಲ್ಲ, ರಾಜ್ಯಲಕ್ಷ್ಮಿ, ಜಯಲಕ್ಷ್ಮಿ, ಧನಲಕ್ಷ್ಮಿ, ಅಚಲವಾದ ನೀತಿ ಇವು ಕಟ್ಟಿಟ್ಟವುಗಳೇ.

ಮಹಾಭಾರತದ ಯುದ್ಧದ ಪ್ರಾರಂಭದ ಕಾಲದಲ್ಲಿ, ಅರ್ಜುನನು ಉಭಯ ಸೈನ್ಯದೊಳಗಿನ ತನ್ನ ಬಂಧುಬಳಗವನ್ನೂ ಗುರುಹಿರಿಯರನ್ನೂ ನೋಡಿ ಕಳವಳಗೊಂಡು, 'ಇವರನ್ನು ಹೇಗೆ ಕೊಲ್ಲಲಿ' ಎಂದು ಹಿಂದಕ್ಕೆ ಸರಿದು ನಿಂತನು. ಅರ್ಜುನನ ಮನದಲ್ಲಿ ಹುಟ್ಟಿದ ಆ ಮೋಹವು ಆರ್ಯರಿಗೆ ಸಲ್ಲದುದೂ,ಸ್ವರ್ಗಪ್ರಾಪ್ತಿಗೆ ವಿರೋಧವಾದುದೂ ಕೀರ್ತಿಗೆ ಕಲಂಕ ಹಚ್ಚುವಂಥದೂ ಆಗಿತ್ತು. ಆತನ ಮನದೊಳಗಿನ ಆ ಕಶ್ಮಲವನ್ನು ಕಳೆಯುವುದಕ್ಕಾಗಿ ಶ್ರೀಕೃಷ್ಣನ ಉಪದೇಶ. ಆತನ ಆ ಹೇಡಿತನವನ್ನು ಹೋಗಲಾಡಿಸುವುದಕ್ಕಾಗಿ ಗೀತೆಯ ರಚನೆ. ಆತನ ಹೃದಯದೌರ್ಬಲ್ಯವನ್ನು ಹೊಡೆದೋಡಿಸುವುದಕ್ಕೋಸ್ಕರ ಈ ಪ್ರಯತ್ನ. ಅರ್ಜುನನ ಚಿತ್ತಾಂಬುಧಿಯಲ್ಲಿ ಬಲವಾಗಿ ಎಸೆಯಲ್ಪಟ್ಟ ಆ ಸಂದೇಹದಿಂದ ಅನೇಕ ತರಂಗಗಳೆದ್ದಿದ್ದವು, ಅವು ಹಬ್ಬುತ್ತ ಹಬ್ಬುತ್ತ ನಡೆದು, ಆತನ ಮನದಲ್ಲಿ ಭಯಂಕರವಾದ ಕೋಲಾಹಲವನ್ನು ಎಬ್ಬಿಸಿದ್ದವು. ಆ ಕೋಲಾಹಲವನ್ನು ಶಾಂತಗೊಳಿಸುವುದಕ್ಕೋಸ್ಕರ ಶ್ರೀಕೃಷ್ಣನ ಈ ಸಾಹಸ. ಅರ್ಜುನನು ಆ ಸಂದೇಹತರಂಗಗಳಿಂದ ಧರ್ಮಸಮ್ಮೂಢನಾಗಿದ್ದನು. ಆತನು ಮೂಲತಃ ಶೂರಸ್ವಭಾವದವನೇನೋ ನಿಜ. ಆದರೆ, ಈ ಮೋಹದ ಮುಸುಕಿನಿಂದ ಆತನ ಮೂಲಸ್ವಭಾವವು ಮರೆಯಾಗಿತ್ತು. ಆದರೆ, ಶ್ರೀಕೃಷ್ಣನಲ್ಲಿದ್ದ ಆತನ ವಿಶ್ವಾಸವು ಮಾತ್ರ ಕಡಿಮೆಯಾಗಿದ್ದಿಲ್ಲ ಅದು ದೃಢವಾಗಿತ್ತು. ಆದುದರಿಂದ, ಆ ಸಂಕಟಸಮಯದಲ್ಲಿ, ಆತನು ಶ್ರೀಕೃಷ್ಣನಿಗೆ ಮೊರೆಹೋದನು. ಆಗ, ಶ್ರೀಕೃಷ್ಣನು ಅರ್ಜುನನನ್ನು ನಿಮಿತ್ತಮಾಡಿಕೊಂಡು ಲೋಕಕ್ಕೆ, ಜೀವದ ಅಮರತ್ವ, ಕರ್ಮಯೋಗದ ರಹಸ್ಯ, ಜ್ಞಾನದ ಮಹಿಮೆ, ಭಕ್ತಿಯ ಹೆಚ್ಚಳ ಇವೇ ಮುಂತಾದ ಗಹನ ವಿಷಯಗಳ ಊಹಾಪೋಹವನ್ನು ಮಾಡಿ, ಆತನನ್ನು ಸಮಾಧಾನಗೊಳಿಸಿರುವನು. ಶ್ರೀಕೃಷ್ಣನು ಹೇಳಿದ ಈ ಉಪದೇಶದ

ಮಹಿಮೆಯೂ ಗೀತೆಯಲ್ಲಿಯೇ ಅಲ್ಲಲ್ಲಿ ವರ್ಣಿತವಾಗಿರುವುದು. ಅದನ್ನೇ ನಾವು ಇಲ್ಲಿ ಕೊಡುತ್ತೇವೆ.*

ಶ್ರೀಕೃಷ್ಣನು ಹೇಳಿದ ಯೋಗವು, ಅಂದರೆ ಜ್ಞಾನೋಪಾಯವು ಸಂಸಾರದ ಕಟ್ಟನ್ನು ಚಟ್ಟನೆ ಕಳಚಬಲ್ಲದು. ಅದನ್ನು ಆಚರಿಸುವಾಗ ನಡುವೆ ನಿಂತರೂ ದೋಷವಿಲ್ಲ. ಏಕೆಂದರೆ, ಆ ಧರ್ಮದ ಸ್ವಲ್ಪೇ ಆಚರಣೆಯೂ ಕೂಡ, ನಮ್ಮನ್ನು ಮಹಾಸಂಕಟಗಳಿಂದ ಉದ್ಧರಿಸಬಲ್ಲದು. ನಿಜವಾಗಿ ನೋಡಿದರೆ, ಜಾಣರು ದೃಢಬುದ್ಧಿಯುಳ್ಳವರೇ ಇರುತ್ತಾರೆ. ಬುದ್ಧಿವಂತರಿಗೆ ಒಂದೇ ಬುದ್ಧಿ, ದಡ್ಡರಿಗೆ ಮಾತ್ರ ನೂರೆಂಟು ಬುದ್ಧಿ. ಹೀಗೆ ನೂರೆಂಟು ಬುದ್ಧಿಯುಳ್ಳ ದಡ್ಡರ ಮನಸ್ಸು ದೇವರಲ್ಲಿ ನಿಲ್ಲುವುದಿಲ್ಲ. ಗೀತೆಯಲ್ಲಿ ಹೇಳಿದ ಕರ್ಮಯೋಗವನ್ನು ಶ್ರೀಕೃಷ್ಣನು, ಬಹಳ ಹಿಂದಿನ ಕಾಲದಲ್ಲಿ, ಸೂರ್ಯನಿಗೆ ಉಪದೇಶಿಸಿದ್ದನು; ಸೂರ್ಯನು ಮನುವಿಗೆ, ಮನುವು ಇಕ್ಷ್ವಾಕುವಿಗೆ. ಹೀಗೆ, ಪರಂಪರೆಯಿಂದ ಬಂದ ಆ ಕರ್ಮಯೋಗವನ್ನು ರಾಜರೂ ಋಷಿಗಳೂ ಅರಿತವರಾಗಿದ್ದರು. ಆದರೆ, ಮುಂದೆ ಕಾಲವಶದಿಂದ, ಅದು ನಷ್ಟವಾಯಿತು. ಆ ಪುರಾತನವಾದ ಮತ್ತು ಉತ್ತಮರಹಸ್ಯವುಳ್ಳ ಕರ್ಮಯೋಗವನ್ನೇ ಶ್ರೀಕೃಷ್ಣನು ತನ್ನ ಭಕ್ತನೂ ಸಖನೂ ಆದ ಅರ್ಜುನನಿಗೆ ಪುನಃ ಹೇಳಿದ್ದಾನೆ. ಯಾವ ಮಾನವರು ಶ್ರದ್ಧೆಯಿಂದಲೂ ಅಸೂಯಾರಹಿತರಾಗಿಯೂ ಇದನ್ನು ಆಚರಿಸುವರೋ, ಅವರಿಗೆ ಕರ್ಮಬಂಧವಿಲ್ಲ. ಅದೇ, ಯಾರು ತಿರಸ್ಕಾರ

---

* ಈ ಇಡೀ ಪ್ರಕರಣವು ಕೆಳಗೆ ಕಾಣಿಸಿದ ಗೀತೆಯ ಶ್ಲೋಕಗಳ ಆಧಾರದಿಂದ ಬರೆಯಲ್ಪಟ್ಟಿದೆ.

೧೮.೭೪; ೧೮.೭೫; ೧೮.೭೬; ೧೮.೭೭; ೧೮.೭೮; ೧.೪೭; ೨.೨; ೨.೩; ೨.೭; ೨.೩೯ ೨.೪೦; ೨.೪೧; ೨.೪೪, ೪.೧; ೪.೨; ೪.೩: ೩.೩೧; ೩.೩೨; ೪.೧೬; ೪.೧೭; ೩.೯, ೪.೨೮ ೪.೩೨; ೪.೩೩; ೪.೩೭; ೪.೩೮; ೫.೧೫; ೫.೧೬; ೭.೨; ೭.೩; ೭.೧೩; ೯.೧; ೧೦.೨ ೧೦.೩; ೧೩.೫; ೧೩.೧೩; ೧೩.೧೯; ೧೩.೨೪; ೧೩.೩೫; ೧೪.೧; ೧೪.೨; ೧೫.೧; ೧೫.೧೯; ೧೫.೨೦; ೧೬.೨೩; ೧೬.೨೪; ೯.೧೧; ೯.೧೨; ೯.೧೩; ೯.೧೪; ೯.೧೫, ೪.೫; ೪.೬; ೪.೩೪; ೧೮.೬೭; ೧೮.೬೮; ೧೮.೬೦; ೧೮.೭೧; ೭.೧, ೭.೧೪, ೭.೧೫; ೪.೪೦ ೯.೬, ೯.೧೪.

ಬುದ್ಧಿಯನ್ನು ತಾಳಿ ಅದರಂತೆ ಆಚರಿಸುವುದಿಲ್ಲವೋ ಅವರು ಅವಿವೇಕಿಗಳು, ಜ್ಞಾನಶೂನ್ಯರು ಅಂಥವರು ಹಾಳಾಗುವುದೇ ನಿಶ್ಚಯ. ಕರ್ಮವಾವುದು, ಅಕರ್ಮವಾವುದು, ವಿಕರ್ಮವಾವುದು ಎಂಬುದನ್ನು ಎಂತೆಂಥ ಬುದ್ಧಿವಂತರೂ ಅರಿಯರು. ಕರ್ಮಯೋಗದ ರಹಸ್ಯವನ್ನು ತಿಳಿದುಕೊಳ್ಳುವುದು ಅಷ್ಟು ಕಠಿನವಾಗಿದೆ. ಪರಮಾತ್ಮನ ಪ್ರೀತ್ಯರ್ಥವಾಗಿ ಮಾಡಲ್ಪಡುವ ಕರ್ಮಗಳೆಲ್ಲವೂ ಯಜ್ಞಗಳೇ. ಅಂಥ ಯಜ್ಞಗಳು ದ್ರವ್ಯಯಜ್ಞ, ಜ್ಞಾನಯಜ್ಞ, ತಪೋಯಜ್ಞ ಎಂದು ನಾನಾ ವಿಧಗಳಾಗಿವೆ. ಅವನ್ನು ತಿಳಿದವನು ಮೋಕ್ಷಪಡೆಯುತ್ತಾನೆ.

ಅವೆಲ್ಲ ಯಜ್ಞಗಳಲ್ಲಿ ಜ್ಞಾನಯಜ್ಞವೇ ಹೆಚ್ಚಿನದು. ಜ್ಞಾನಕ್ಕಿಂತ ಪವಿತ್ರವಾದ ವಸ್ತುವು ಈ ಜಗತ್ತಿನಲ್ಲಿ ಬೇರೊಂದಿಲ್ಲ. ಬೆಂಕಿಯು ಕಟ್ಟಿಗೆಗಳನ್ನು ಸುಟ್ಟು ಬೂದೀ ಮಾಡುವಂತೆ, ಜ್ಞಾನವು ಕರ್ಮದೋಷಗಳನ್ನೆಲ್ಲ ಸುಟ್ಟು ಬೂದೀ ಮಾಡುತ್ತದೆ. ಜ್ಞಾನವನ್ನು ಒಮ್ಮೆ ಚೆನ್ನಾಗಿ ಗಳಿಸಿಕೊಂಡರೆ ಸಾಕು, ಮೋಹವೆಂಬುದು ಮತ್ತೆ ತಲೆಯೆತ್ತುವುದಿಲ್ಲ. ಜನರೆಲ್ಲರೂ ಅಜ್ಞಾನದಿಂದ ಆವೃತರಾಗಿರುವ ಕಾರಣವೇ ಮೋಹಕ್ಕೀಡಾಗುತ್ತಾರೆ. ಜ್ಞಾನದಿಂದ ಆ ಅಜ್ಞಾನವು ತೊಲಗಿತೆಂದರೆ, ಮನುಷ್ಯನಲ್ಲಿ ಸೂರ್ಯಪ್ರಕಾಶದಂತೆ ಒಳಬೆಳಕು ಉಂಟಾಗುತ್ತದೆ. ಜ್ಞಾನವಿಜ್ಞಾನಗಳನ್ನು ತಿಳಿದುಕೊಂಡವನಿಗೆ ಜಗತ್ತಿನಲ್ಲಿ ಮತ್ತೆ ತಿಳಿಯಬೇಕಾದುದೇನೂ ಉಳಿಯುವುದಿಲ್ಲ. ಆದರೆ, ಅವುಗಳನ್ನು ದೊರಕಿಸುವುದಕ್ಕೆ ಪ್ರಯತ್ನ ಮಾಡುವವರು ಸಾವಿರದಲ್ಲಿ ಒಬ್ಬರು. ಮತ್ತು ಹಾಗೆ ಪ್ರಯತ್ನ ಮಾಡುವವರಲ್ಲಿಯೂ ಪರಮಾತ್ಮನನ್ನು ನಿಜವಾಗಿಯೇ ತಿಳಿಯುವವರು ಎಲ್ಲಿಯೋ ಒಬ್ಬರು. ಏಕೆಂದರೆ, ಜಗತ್ತೆಲ್ಲವೂ ತ್ರಿಗುಣಾತ್ಮಕವಾದ ಮಾಯೆಯಿಂದ ಮುಸುಕಿಕೊಂಡಿರುತ್ತದೆ. ಪರಮಾತ್ಮನಿಗೆ ಶರಣು ಹೋದವರು ಮಾತ್ರವೇ ಆ ಮಾಯೆಯನ್ನು ದಾಟಬಲ್ಲರು. ಹಾಗೆ ಮಾಡಿ, ಜ್ಞಾನವಿಜ್ಞಾನಗಳನ್ನು ತಿಳಿದವನು ಸರ್ವಪಾಪಗಳಿಂದ ಮುಕ್ತನಾಗುತ್ತಾನೆ. ಏಕೆಂದರೆ, ಪರಮಾತ್ಮನು ಹುಟ್ಟು ಇಲ್ಲದವನೂ ಅನಾದಿಯೂ ಸರ್ವಲೋಕ ಮಹೇಶ್ವರನೂ ಆಗಿರುವನೆಂಬುದಾಗಿ ಅರಿತವನ ಪಾಪಗಳೆಲ್ಲವೂ ಹೊರಟು ಹೋಗುವವು. ಗೀತೆಯಲ್ಲಿ ಹೇಳಿದ ಕ್ಷೇತ್ರ

ಕ್ಷೇತ್ರಜ್ಞನ ಸ್ವರೂಪದ ಮಹಿಮೆಯೂ ದೊಡ್ಡದಾಗಿದೆ. ಅದು ಅನೇಕ ಋಷಿಗಳಿಂದ ಹೊಗಳಲ್ಪಟ್ಟಿದೆ. ವೇದಗಳ ಋಚೆಗಳಲ್ಲಿಯೂ ಬ್ರಹ್ಮ ಸೂತ್ರಗಳಲ್ಲಿಯೂ ಅದರ ವರ್ಣನೆ ಬಂದಿದೆ. ಜ್ಞೇಯವಸ್ತುವಾದ ಭಗ ವಂತನ ಸ್ವರೂಪವನ್ನು ತಿಳಿದವನಿಗೆ ಮೋಕ್ಷವು ದೊರೆಯುತ್ತದೆ. ಕ್ಷೇತ್ರಜ್ಞಾನ ಮತ್ತು ಜ್ಞೇಯ ಇವುಗಳನ್ನರಿತವನು ಭಗವಂತನಲ್ಲಿ ಇರ ಲಿಕ್ಕೆ ಅರ್ಹನಾಗುತ್ತಾನೆ. ಹಾಗೆಯೇ, ಪುರುಷನ ಸ್ವರೂಪವನ್ನೂ ತ್ರಿಗುಣಗಳಿಂದ ಯುಕ್ತವಾದ ಪ್ರಕೃತಿಯ ಸ್ವರೂಪವನ್ನೂ ಬಲ್ಲವನು, ಆಚರಣೆಯಲ್ಲಿ ಹೇಗೆ ಇದ್ದಾಗ್ಯೂ,ಆತನಿಗೆ ಪುನರ್ಜನ್ಮವಿಲ್ಲ. ಕ್ಷೇತ್ರಕ್ಕೂ ಕ್ಷೇತ್ರಜ್ಞನಿಗೂ ಇರುವ ಭೇದವನ್ನೂ, ಪ್ರಾಣಿಗಳು ಪ್ರಕೃತಿಯ ಬಂಧನ ದಿಂದ ಬಿಡುಗಡೆ ಹೊಂದುವ ಬಗೆಯನ್ನೂ ಯಾವನು ಜ್ಞಾನಚಕ್ಷುವಿ ನಿಂದ ಅರಿಯುತ್ತಾನೋ ಆತನಿಗೆ ಪರಮಗತಿಯುಂಟಾಗುತ್ತದೆ.

ಸತ್ವರಜತಮಗಳೆಂಬ ತ್ರಿಗುಣಗಳ ಜ್ಞಾನವೂ ಜ್ಞಾನಗಳಲ್ಲಿ ಉತ್ತಮವಾದ ಜ್ಞಾನವು. ಅದನ್ನು ತಿಳಿದುಕೊಂಡ ಜ್ಞಾನಿಗಳು ಪರಮಸಿದ್ಧಿಯನ್ನು ಹೊಂದುತ್ತಾರೆ. ಆ ಜ್ಞಾನದ ಸಹಾಯದಿಂದ, ಅವರು ಪರಮಾತ್ಮನೊಡನೆ ಸಾಧರ್ಮ್ಯವನ್ನು ಪಡೆಯುತ್ತಾರೆ. ಅಂಥ ವರು ಸೃಷ್ಟಿಕಾಲದಲ್ಲಿ ಹುಟ್ಟುವುದಿಲ್ಲ, ಪ್ರಳಯಕಾಲದಲ್ಲಿ ಸಾಯುವು ದಿಲ್ಲ; ಅಂದರೆ ಮುಕ್ತರಾಗುತ್ತಾರೆ. ಈ ಸಂಸಾರವೃಕ್ಷದ ಊರ್ಧ್ವದಲ್ಲಿ ರುವ ಮೂಲವನ್ನೂ ಕೆಳಗೆ ಹಬ್ಬಿರುವ ಅದರ ಶಾಖೆಗಳ ಸ್ವರೂಪವನ್ನೂ ತಿಳಿದವನೇ ನಿಜವಾಗಿ ವೇದಗಳನ್ನರಿತವನು. ಯಾವನು ಕ್ಷರಪುರುಷ ನನ್ನೂ ಅಕ್ಷರಪುರುಷನನ್ನೂ ಮತ್ತು ಕ್ಷರಾಕ್ಷರಗಳ ಆಚೆಗಿರುವ ಪುರುಷೋತ್ತಮನನ್ನೂ ಚೆನ್ನಾಗಿ ಅರಿತಿರುವನೋ ಆತನೇ ಸರ್ವೋ ತ್ತಮನು. ಈ ಗುಹ್ಯತಮವಾದ ಶಾಸ್ತ್ರವನ್ನು ಅರಿತವನು ಬುದ್ಧಿ ವಂತನೂ ಕೃತಕೃತ್ಯನೂ ಆಗುತ್ತಾನೆ. ಆದರೆ ಶಾಸ್ತ್ರವಿಧಿಯನ್ನು ಬಿಟ್ಟು ನಡೆಯುವವರಿಗೆ ಸಿದ್ಧಿಯಿಲ್ಲ.ಆದಕಾರಣ,ಕಾರ್ಯವಾವುದು, ಅಕಾರ್ಯ ವಾವುದು ಎಂಬುದನ್ನು ನಿಶ್ಚಯಿಸುವುದಕ್ಕೆ ಶಾಸ್ತ್ರವನ್ನೇ ಪ್ರಮಾಣ ವನ್ನಾಗಿ ಇಟ್ಟುಕೊಂಡು, ಶಾಸ್ತ್ರವಿಧಾನೋಕ್ತವಾಗಿ ಕರ್ಮಮಾಡ ಬೇಕು.

ಗೀತೆಯ ಶ್ರೀಕೃಷ್ಣನು ಮನುಷ್ಯನಲ್ಲ. ಆತನೇ ಪರಮಾತ್ಮನು, ಪರಂಬ್ರಹ್ಮನು.ಮೂಢರು ಮಾತ್ರವೇ ಶ್ರೀಕೃಷ್ಣನು ಮಿಕ್ಕವರಂತೆಯೇ ಒಬ್ಬ ಮನುಷ್ಯನೆಂದು ತಿಳಿಯುತ್ತಾರೆ. ಅಂಥವರ ಆಕಾಂಕ್ಷೆಗಳೂ ವ್ಯರ್ಥ, ಕರ್ಮಗಳೂ ವ್ಯರ್ಥ, ಜ್ಞಾನವೂ ವ್ಯರ್ಥ. ಅವರು ರಾಕ್ಷಸ ಸ್ವಭಾವದವರು, ಆಸುರ ಪ್ರಕೃತಿಯವರು. ಮಹಾತ್ಮರಾದವರು ದೈವೀ ಪ್ರಕೃತಿಯುಳ್ಳವರು. ಅಂಥವರು ಶ್ರೀಕೃಷ್ಣನನ್ನು ಅನನ್ಯ ಮನಸ್ಸಿನಿಂದ ಭಜಿಸುತ್ತಾರೆ, ಆತನನ್ನು ಕುರಿತು ಹಾಡುತ್ತಾರೆ, ಆತನ ಉಪಾಸನೆ ಮಾಡುತ್ತಾರೆ. ವಸ್ತುತಃ ಅರ್ಜುನನಂತೆಯೇ ಶ್ರೀಕೃಷ್ಣನಿಗೂ ಅನೇಕ ಜನ್ಮಗಳಾಗಿವೆ. ಆದರೆ, ಶ್ರೀಕೃಷ್ಣನಿಗೆ ತನ್ನ ಹಿಂದಿನ ಜನ್ಮಗಳೆಲ್ಲವೂ ಗೊತ್ತಿವೆ. ಅರ್ಜುನನಿಗೆ ಗೊತ್ತಿಲ್ಲ. ಶ್ರೀಕೃಷ್ಣನ ಜನ್ಮಗಳು ದಿವ್ಯವಾದ ವುಗಳು, ವಸ್ತುತ: ಆತನಿಗೆ ಹುಟ್ಟು ಅಥವಾ ಜನ್ಮವೆಂಬುದು ಇಲ್ಲವೇ ಇಲ್ಲ. ಆದರೂ ಜನರ ಕಣ್ಣಿಗೆ ಹುಟ್ಟಿದವನಂತೆ ತೋರುತ್ತಾನೆ. ಆತನ ದಿವ್ಯವಾದ ಜನ್ಮಗಳನ್ನೂ ಕರ್ಮಗಳನ್ನೂ ಅರಿತವನಿಗೆ ಪುನರ್ಜನ್ಮ ವಾಗದೆ ಮೋಕ್ಷವೇ ಆಗುತ್ತದೆ.

ಗೀತೆಯಲ್ಲಿ ಹೇಳಿದ ಜ್ಞಾನವನ್ನು ಗಳಿಸುವುದಾದಲ್ಲಿ ನಾವು ತತ್ವ ದರ್ಶಿಗಳಿಗೆ ಶರಣು ಹೋಗಬೇಕು. ಅವರು ಜ್ಞಾನವನ್ನು ಉಪದೇಶಿ ಸುವರು. ಆದರೆ, ಆ ಜ್ಞಾನವು ಬಹಳ ಗೋಪ್ಯವಾದುದು. ಭಕ್ತಿ ವೈರಾಗ್ಯಗಳಿಲ್ಲದವರಿಗೂ ನಮ್ರರಾಗಿರದಿದ್ದವರಿಗೂ ಅದು ಲಭ್ಯವಲ್ಲ. ಪರಮಾತ್ಮನಲ್ಲಿ ಅಸೂಯಾಪರರಾದವರಿಗಂತೂ ಅದನ್ನು ಸರ್ವಥಾ ಉಪದೇಶಿಸಬಾರದು. ಗೀತೆಯನ್ನು ಪರರಿಗೆ ಉಪದೇಶಮಾಡಿದವರ ಲ್ಲಿಯೂ ಭಕ್ತಿಯು ಉದಿತವಾಗಿ ತದ್ವಾರಾ ಮೋಕ್ಷವುಂಟಾಗುತ್ತದೆ. ಈ ಧರ್ಮ್ಯವಾದ ಸಂವಾದವನ್ನು ಅಧ್ಯಯನ ಮಾಡುವುದೆಂದರೆ ಜ್ಞಾನ ಯಜ್ಞದಿಂದ ಆತನನ್ನು ಪೂಜಿಸುವುದು. ಈ ಶಾಸ್ತ್ರವನ್ನು ಶ್ರದ್ಧೆಯಿಂದ ಕೇಳುವವನು ಕೂಡ ಪಾಪದಿಂದ ಮುಕ್ತನಾಗಿ ಪುಣ್ಯವಂತರಿಗೆ ಲಭಿ ಸುವ ಶುಭಲೋಕಗಳನ್ನು ಪಡೆಯುತ್ತಾನೆ.

ಆದರೆ, ಪರಮಾತ್ಮನಲ್ಲಿ ಅಚಲವಾದ ಭಕ್ತಿಯುಳ್ಳವನಿಗೇನೇ ಈ ಜ್ಞಾನವು ಲಭ್ಯವು. ಆತನಲ್ಲಿ ಮನಸ್ಸನಿಟ್ಟು, ಆತನೇ ಆಶ್ರಯನೆಂದು

ಯೋಗವನ್ನಾಶ್ರಯಿಸುವವನಿಗೆ ನಿಶ್ಚಿತವಾದ ಮತ್ತು ಪೂರ್ಣವಾದ ಜ್ಞಾನವು ದೊರೆಯುವುದು. ಆತನಿಗೆ ಶರಣು ಹೋದವರು ಮಾತ್ರವೇ ಮಾಯೆಯ ಮುಸಕನ್ನು ಹರಿಯಬಲ್ಲರು, ಪಾಪಿಷ್ಠರೂ ಮೂಢರೂ ಆದ ನರಾಧಮರು ಆಸುರಭಾವವನ್ನಾಶ್ರಯಿಸಿ, ಆತನಿಗೆ ಶರಣು ಹೋಗುವುದೇ ಇಲ್ಲ. ಶ್ರದ್ಧಾವಂತನೂ, ಜಿತೇಂದ್ರಿಯನೂ ಆದವನಿಗೆ ಮಾತ್ರವೇ ಜ್ಞಾನವು ದೊರೆಯುವುದು. ಅಜ್ಞನೂ ಶ್ರದ್ಧೆಯಿಲ್ಲದವನೂ ಸಂಶಯವೃತ್ತಿಯುಳ್ಳವನೂ ನಷ್ಟನಾಗುತ್ತಾನೆ.ಆತನಿಗೆ ಇಹಲೋಕವೂ ಇಲ್ಲ; ಪರಲೋಕವೂ ಇಲ್ಲ. ಗೀತೆಯಲ್ಲಿ ಹೇಳಿದ ಧರ್ಮದಲ್ಲಿ ವಿಶ್ವಾಸ ವಿಡದವರು ಭಗವಂತನನ್ನು ಹೊಂದದೆ, ಮೃತ್ಯುಸಂಸಾರದಲ್ಲಿ ಬೀಳು ತ್ತಾರೆ. ಜ್ಞಾನಿಗಳು ಯಾವಾಗಲೂ ಪರಮಾತ್ಮನಲ್ಲಿ ಮನಸ್ಸಿಟ್ಟು, ಆತನ ವಿಷಯಕ ವ್ಯಾಪಾರಗಳನ್ನೇ ಮಾಡುತ್ತ, ಆತನ ಗುಣಗಳನ್ನೇ ಗಾನಮಾಡುತ್ತ ಸದಾ ಆನಂದದಲ್ಲಿ ಇರುತ್ತಾರೆ.

ಈ ರೀತಿಯಾಗಿ, ಗೀತೆಯಲ್ಲಿಯೇ ಕರ್ಮ-ಜ್ಞಾನ-ಭಕ್ತಿಗಳ ಮಹಿಮೆಯು ಹೀಗೆ ವಿವಿಧವಾಗಿ ವರ್ಣಿಸಲ್ಪಟ್ಟಿದೆ.



## ೨ನೆಯ ಪ್ರಕರಣ

# ಉಪಕ್ರಮ

ಶ್ರವಣಮನಕಾನಂದವೀವುದು । ಭವಜನಿತ ದುಃಖಗಳ ಕಳೆವುದು ।
ವಿವಿಧಭೋಗಗಳಿಹಪರಂಗಳಲಿತ್ತು ಸಲಹುವುದು ॥

—ಜಗನ್ನಾಥ ದಾಸರು

ಗೀತೆಯು ನಮ್ಮ ಕರ್ನಾಟಕದ ಶಿಲ್ಪಕಲೆಯಿಂದ ಕಟ್ಟಿದ ಒಂದು ದಿವ್ಯವಾದ ಮತ್ತು ಮನೋಹರವಾದ ಮಂದಿರವು. ಅತ್ಯಂತ ಸ್ವಲ್ಪ ಸ್ಥಳದಲ್ಲಿ ಅತ್ಯಂತ ವಿವಿಧವಾದ ಕೆತ್ತಿಗೆಯ ಕೆಲಸಗಳನ್ನು ಅತಿಸೂಕ್ಷ್ಮವಾಗಿಯೂ ಅಂದವಾಗಿಯೂ ಯಥಾಪ್ರಮಾಣವಾಗಿಯೂ ಕೆತ್ತುವುದೇ ನಮ್ಮ ಶಿಲ್ಪಿಗರ ಕೌಶಲ್ಯ, ನಮ್ಮ ಶಿಲ್ಪಕಲೆಯ ವೈಶಿಷ್ಟ್ಯ. ಎಲ್ಲಿ ನೋಡಿದಲ್ಲಿ ಸೂಕ್ಷ್ಮವಾದ ಮತ್ತು ಸುಂದರವಾದ ಕುಸುರಿನ ಕೆಲಸ; ಎಲ್ಲಿ ನೋಡಿದಲ್ಲಿ ಸುಳುವುಗಳು, ಎಸಳುಗಳು, ಮುರುವುಗಳು, ತಿರುವುಗಳು; ಎಲ್ಲಿ ನೋಡಿದಲ್ಲಿ ವಿವಿಧತೆಯು ತುಂಬಿ ತುಳುಕುತ್ತದೆ. ಆದರೆ ಇದೆಲ್ಲ ವಿವಿಧತೆಯ ಬುಡಕ್ಕೆ ಒಂದು ಸಾಮಾನ್ಯವಾದ ಕಲ್ಪನೆಯಿರುತ್ತದೆ. ಇಡೀ ಕಟ್ಟಡವು ಯಾವುದೊಂದು ವಿಶೇಷವಾದ ತತ್ವದ ಮೇಲೆ ಕಟ್ಟಲ್ಪಟ್ಟಿರುತ್ತದೆ. ಆ ಕಟ್ಟಡವನ್ನು ಕಟ್ಟುವುದರಲ್ಲಿ ಒಂದು ವಿಶಿಷ್ಟವಾದ ಉದ್ದೇಶವಿರುತ್ತದೆ. ಆ ಮಂದಿರದಲ್ಲಿ ಕಾಣುವ ಅನೇಕ ಚೈತನ್ಯಮಯವಾದ ಚಿತ್ರಾವಳಿಗಳ ಜೀವಾಳವು ಒಂದೇ ಇರುತ್ತದೆ. ಗೀತಾಭವನದ ರಚನೆಯೂ ಹೀಗೆಯೇ ವಿಚಿತ್ರವಾಗಿದೆ, ರಾಮಣೀಯಕವಾಗಿದೆ. ಗೀತೆಯಲ್ಲಿ ಬಾರದ ವಿಷಯವಿಲ್ಲ. ವೇದಾಂತ ಬಂದಿದೆ, ವ್ಯವಹಾರ ಬಂದಿದೆ. ಕರ್ಮಯೋಗ ಬಂದಿದೆ, ಭಕ್ತಿಯೋಗ ಬಂದಿದೆ, ಅವತಾರ ಮೀಮಾಂಸೆ ಬಂದಿದೆ, ವಿಭೂತಿ ವರ್ಣನೆ ಬಂದಿದೆ, ಸಂಸಾರವೃಕ್ಷ ಬಂದಿದೆ, ವಿಶ್ವರೂಪ ದರ್ಶನ ಬಂದಿದೆ, ವರ್ಣಾಶ್ರಮ ಬಂದಿದೆ, ಸಂನ್ಯಾಸ ಬಂದಿದೆ, ಯೋಗ ಬಂದಿದೆ, ಭೋಗ ಬಂದಿದೆ, ತ್ಯಾಗ ಬಂದಿದೆ, ನೀತಿಶಾಸ್ತ್ರ ಬಂದಿದೆ,

ಸಮಾಜಶಾಸ್ತ್ರ ಬಂದಿದೆ, ಬಹಳವೇಕೆ? ಶ್ರಾದ್ಧ ಬಂದಿದೆ, ಶಕುನ ಬಂದಿದೆ. ಇಷ್ಟೆಲ್ಲ ವಿಷಯಗಳನ್ನು ಶ್ರೀಕೃಷ್ಣನು ತನ್ನ ೭೦೦ ಶ್ಲೋಕಗಳಲ್ಲಿ ಸಮಾವಿಷ್ಟಮಾಡಿರುವುದು ಅತ್ಯಂತ ಆಶ್ಚರ್ಯಕರವಾದ ಸಂಗತಿಯಲ್ಲವೆ? ನೀವು ಗೀತಾಭವನದಲ್ಲಿ ಹೊಕ್ಕು ಕರ್ಮಯೋಗದ ಕಲ್ಯಾಣಮಂಟಪವನ್ನೇ ನೋಡಿರಿ, ಜ್ಞಾನದ ವಿಶಾಲವಾದ ಸಭಾಮಂಟಪವನ್ನೇ ನಿರೀಕ್ಷಿಸಿರಿ, ನವವಿಧ ಭಕ್ತಿಯ ನವರಂಗವನ್ನೇ ಪ್ರವೇಶಿಸಿರಿ, ಅಥವಾ ಧ್ಯಾನದ ಮೌನ ಮಂಟಪವನ್ನೇ ನೋಡಿರಿ, ನಿಮಗೆ ನೂರೆಂಟು ತರದ ಸೂಕ್ಷ್ಮವಾದ ತತ್ತ್ವಗಳು ಕಣ್ಣಿಗೆ ಬೀಳುತ್ತವೆ. ಅವುಗಳನ್ನು ಹೇಳುವ ರೀತಿಯೂ ವಿವಿಧವಾಗಿದೆ, ಅಂದವಾಗಿದೆ. ಎಲ್ಲೆಲ್ಲಿಯೂ ಸೂಕ್ಷ್ಮವಾದ ವಿಚಾರಗಳು, ನಯವಾದ ಸಿದ್ಧಾಂತಗಳು, ಆಲ್ಹಾದಕರವಾದ ಆಲಾಪಗಳು ಕಂಡು ಬರುವವು. ಆದಕಾರಣ, ಮನುಷ್ಯನು ಒಳಹೊಕ್ಕ ಕೂಡಲೆ ಯಾವುದನ್ನು ನೋಡಬೇಕು, ಯಾವುದನ್ನು ಬಿಡಬೇಕೆಂಬುದು ಆತನಿಗೆ ಗೊತ್ತಾಗದೆ, ಆತನು ಹೌಹಾರಿ ಹೋಗುತ್ತಾನೆ. ಪ್ರತಿಯೊಂದು ಹೆಜ್ಜೆಗೆ ಆತನಿಗೆ ಆನಂದವೇನೋ ಆಗುತ್ತದೆ. ಆದರೆ, ಅನೇಕಾನೇಕ ವಿಷಯಗಳು ಆತನ ಕಣ್ಣಿನ ಮುಂದೆ ಬಂದು ನಿಲ್ಲುವುದರಿಂದ, ಯಾವುದಕ್ಕೆ ಎಷ್ಟು ಮಹತ್ತ್ವವನ್ನು ಕೊಡಬೇಕೆಂಬುದು ಆತನಿಗೆ ತಿಳಿಯದೆ ಹೋಗುತ್ತದೆ. ಅಲ್ಲದೆ, ಅನೇಕ ಕಡೆಗೆ ಪುನರುಕ್ತಿಗಳು ಕಂಡು ಬರುತ್ತವೆ. ಕರ್ಮದಿಂದ ಮುಕ್ತಿಯೆಂದೂ ಹೇಳಿದೆ, ಜ್ಞಾನದಿಂದ ಮುಕ್ತಿಯೆಂದು ಮತ್ತೊಂದು ಕಡೆಗೆ ಹೇಳಿದೆ; ಮಗುದೊಂದು ಕಡೆಗೆ ಭಕ್ತಿಯಿಲ್ಲದೆ ಮುಕ್ತಿ ದೊರೆಯದೆಂದು ಹೇಳಿದೆ. ಇದರಲ್ಲಿ ಯಾವುದು ನಿಜವು ಎಂಬುದು ತಿಳಿಯದೆ ಹೋಗುತ್ತದೆ. ಇವೆಲ್ಲವುಗಳನ್ನು ಸಮನ್ವಯ ಮಾಡುವುದು ಹೇಗೆ ಎಂಬುದು ತೋಚದೆ ಹೋಗುತ್ತದೆ. ಅದಕ್ಕೆ ಕಾರಣವೇನೆಂದರೆ, ಇಡೀ ಗೀತೆಯ ಸಂದೇಶವಾವುದೆಂಬುದು ನಮ್ಮ ಲಕ್ಷ್ಯಕ್ಕೆ ಮೊದಲಿಗೆ ಬಂದರೆ ಮಾತ್ರವೇ ಇವೆಲ್ಲ ವಿವಿಧ ವಿಷಯಗಳ ಮತ್ತು ವಿರೋಧಾಭಾಸಗಳ ಏಕವಾಕ್ಯತೆಯನ್ನು ಮಾಡುವುದು ಸಾಧ್ಯವಾಗುತ್ತದೆ ಇಲ್ಲದಿದ್ದರೆ ಇಲ್ಲ. ಇಡೀ ಗೀತೆಯ ಒಟ್ಟು ಮಹಾತಾತ್ಪರ್ಯವಾವುದೆಂಬುದು ಮುಂಚೆ ನಮಗೆ ಗೊತ್ತಾ

ದರೆ, ನಾವು ಆ ವಿರೋಧಾಭಾಸಗಳ ಮರ್ಮವನ್ನು ತಿಳಿಯಬಹುದು. ಮತ್ತು ಆಗ ನಿಜವಾಗಿ ಗೀತೆಯಲ್ಲಿ ನಿಷ್ಕಾರಣವಾದ ಪುನರುಕ್ತಿಯೂ ಇಲ್ಲ, ವಿರೋಧವೂ ಇಲ್ಲವೆಂಬುದು ನಮಗೆ ತಿಳಿದು ಬರುವುದು. ಆದುದರಿಂದ, ಈ ಗ್ರಂಥದಲ್ಲಿ, ನಾವು ಹಾಗೆ ಗೀತೆಯ ಮುಖ್ಯ ಸಂದೇಶವಾವುದೆಂಬುದನ್ನು ವಾಚಕರ ಲಕ್ಷ್ಯಕ್ಕೆ ತಂದುಕೊಡುವವರಿದ್ದೇವೆ. ನಾವು ಗೀತಾಭವನದ ಯಾವ ಸುಂದರವಾದ ಭಾಗದಲ್ಲಿಯೂ ವಾಚಕರನ್ನು ಕರೆದುಕೊಂಡು ಹೋಗಿ, ಅಲ್ಲಿಯ ಸೂಕ್ಷ್ಮವಾದ ಚಿತ್ರಗಳನ್ನು ಅವರಿಗೆ ತೋರಿಸಲು ಇಚ್ಛಿಸುವುದಿಲ್ಲ. ಒಟ್ಟಿನ ಮೇಲೆ, ಗೀತಾಭವನದ ಇಡೀ ರಚನೆಯು ಹೇಗಿರುತ್ತದೆಂಬುದನ್ನು ಹೇಳಿ,ಅದರಲ್ಲಿಯ ಮುಖ್ಯ ಭಾಗಗಳನ್ನು ರಚಿಸುವ ಉದ್ದೇಶವೇನು,ಅವು ಯಾವ ತತ್ವಗಳ ಮೇಲೆ ಕಟ್ಟಲ್ಪಟ್ಟಿರುತ್ತವೆಂಬುದನ್ನು ಮಾತ್ರವೇ ತೋರಿಸಿ, ನೆಟ್ಟಗೆ ವಾಚಕರನ್ನು ಮಂದಿರದ ನಡುಗುಡಿಯ ಕಡೆಗೆ ಕರೆದುಕೊಂಡು ಹೋಗಿ, ದೇವಿಯ ದರ್ಶನವನ್ನು ಮಾಡಿಸುವೆವು. ಗೀತಾಮಂದಿರದ ಮಿಕ್ಕ ಭಾಗಗಳ ರಚನೆಯೆಲ್ಲವೂ ಈ ನಡುಗುಡಿಯನ್ನು ಪುಷ್ಟೀಕರಿಸುವುದಕ್ಕೆ. ಗೀತಾಸಂದೇಶದಲ್ಲಿ ಹೇಳುವ ತತ್ವಗಳ ಸಮರ್ಥನೆಗಾಗಿ ಮಿಕ್ಕ ಪ್ರಕರಣಗಳ ಉತ್ಪತ್ತಿ. ಗೀತೆಯಲ್ಲಿ ಅನೇಕ ಪ್ರಮೇಯಗಳು ಬಂದಿದ್ದರೂ ಅವೆಲ್ಲ ಪ್ರಮೇಯಗಳಲ್ಲಿ ಸಂದೇಶದಲ್ಲಿ ಬಂದಿರುವ ಪ್ರಮೇಯಗಳೇ ಅತಿಮುಖ್ಯವಾದವುಗಳು. ಮಿಕ್ಕವೆಲ್ಲವೂ ಈ ಪ್ರಮೇಯಗಳಿಗೆ ಆಧಾರ ಕೊಡುವುದಕ್ಕಾಗಿ. ಗೀತೆಯ ಶಬ್ದದಲ್ಲಿ ಹೇಳುವುದಾದಲ್ಲಿ, ಅವೆಲ್ಲ ವಿವಿಧ ತತ್ವಮಣಿಗಳು ಗೀತಾ ಸಂದೇಶವೆಂಬೀ ಒಂದೇ ದಾರದಲ್ಲಿ ಪೋಣಿಸಲ್ಪಟ್ಟಿವೆ. ಮೊದಲು ನಾವು ಆ ಜೀವಾಳವನ್ನು ಕಂಡುಹಿಡಿಯಬೇಕು, ಆ ಸೂತ್ರವನ್ನು ಗುರುತಿಸಿಕೊಳ್ಳಬೇಕು. ಹಾಗೆ ಮಾಡಿದರೆ ಮಾತ್ರ ನಾವು ಯಾವ ಗೊಂದಲದಲ್ಲಿಯೂ ಬೀಳುವುದಿಲ್ಲ. ಇಲ್ಲದಿದ್ದರೆ, ನಾನಾವೃಕ್ಷಗಳಿಂದ ತುಂಬಿದ ಕಾನನದಲ್ಲಿ ಕಣ್ಣುಕಟ್ಟಿ ಬಿಟ್ಟವರಂತೆ ನಮ್ಮ ಅವಸ್ಥೆಯಾಗಬಹುದು.

ಈ ಮುಖ್ಯ ಸಂದೇಶವಾವುದೆಂಬುದನ್ನು ಲಕ್ಷ್ಯದಲ್ಲಿ ತಾರದಿರುವದರಿಂದಲೇ ಅನೇಕರು ಅನೇಕ ಬಗೆಯಾಗಿ ಅಡ್ಡದಾರಿಗಳನ್ನು ಹಿಡಿಯುತ್ತಾರೆ. ಗೀತೆಯಲ್ಲಿಯ ಎಲ್ಲಕ್ಕೂ ಮಹತ್ವದ ಶ್ಲೋಕವಾವುದೆಂಬುದನ್ನು

ಹುಡುಕುವ ಪ್ರಯತ್ನವು ಈ ಮಾದರಿಯದು. ಏಕೆಂದರೆ, ಗೀತೆಯಲ್ಲಿ ಶ್ರೀಕೃಷ್ಣನು ಒಂದೇ ಶ್ಲೋಕದಲ್ಲಿ ತನ್ನ ತತ್ವಗಳೆಲ್ಲವನ್ನೂ ಸ್ಪಷ್ಟವಾಗಿ ಹೇಳುವ ಉದ್ದೇಶವನ್ನೇ ಇಟ್ಟುಕೊಂಡಿದ್ದಿಲ್ಲ. ಅಂದ ಬಳಿಕ ಹಾಗೆ ಒಂದೇ ಶ್ಲೋಕವು ಹೇಗೆ ಸಿಕ್ಕಬೇಕು ? ಗೀತೆಯು ಸಂವಾದಾತ್ಮಕ ಗ್ರಂಥವೆಂಬುದನ್ನು ಈ ಜನರು ಮರೆಯುತ್ತಾರೆ. ಮಾತಿನ ಭರದಲ್ಲಿ ಹೇಳತಕ್ಕಷ್ಟು ಮಾತ್ರ ಶ್ರೀಕೃಷ್ಣನು ಹೇಳಿರುತ್ತಾನಲ್ಲದೆ, ಆತನು ಯಾವುದೊಂದು ತತ್ವಜ್ಞಾನದ ಶಾಸ್ತ್ರೀಯ ಪುಸ್ತಕವನ್ನು ಬರೆದಿರುವುದಿಲ್ಲ. ಆದಕಾರಣ, ಯಾವುದೊಂದೇ ಶ್ಲೋಕದಲ್ಲಿ ಯಾವತ್ತು ತತ್ವಗಳು ಅಡಕವಾಗಿರುವ ಶ್ಲೋಕವೊಂದು ಸಿಕ್ಕುವುದು ಅಸಾಧ್ಯ. ಇನ್ನು ಇಷ್ಟು ಮಾತ್ರ ನಿಜ. ಏನೆಂದರೆ, ಅನೇಕ ಕಡೆಗೆ ತನ್ನ ತತ್ವಗಳನ್ನು ಉಪಸಂಹಾರ ಮಾಡಿರುವನು. ಆ ಉಪಸಂಹಾರಾತ್ಮಕ ಶ್ಲೋಕಗಳು ಮುಖ್ಯ ಶ್ಲೋಕಗಳು. ಆದರೆ ಆಯಾ ಪ್ರಸಂಗದಲ್ಲಿ ಉಪಸಂಹಾರದ ರೀತಿಯು ಭಿನ್ನ ಭಿನ್ನವಾಗಿರುವುದು. ಕರ್ಮಯೋಗದ ಉಪಸಂಹಾರಾತ್ಮಕ ಶ್ಲೋಕದಲ್ಲಿ ಕರ್ಮಯೋಗದಿಂದಲೇ ಮುಕ್ತಿಯೆಂದೂ ಭಕ್ತಿಯೋಗದ ಉಪಸಂಹಾರಾತ್ಮಕ ಶ್ಲೋಕದಲ್ಲಿ ಭಕ್ತಿಯಿಂದಲೇ ಮುಕ್ತಿಯೆಂದೂ ಹೀಗೆಯೇ ವಿವಿಧವಾಗಿ ಹೇಳಿರುವನು. ಆದರೆ, ಅಂಥ ಉಪಸಂಹಾರಾತ್ಮಕ ಶ್ಲೋಕಗಳಲ್ಲಿ ಮಿಕ್ಕ ತತ್ವಗಳ ಬೀಜಗಳನ್ನು ಸೂಕ್ಷ್ಮವಾಗಿ ಸೇರಿಸಲಿಕ್ಕೆ ಬಹುಶಃ ಮರೆತಿರುವುದಿಲ್ಲ. ಇರಲಿ. ಗೀತೆಯ ಯೋಗಕ್ಕೆ ಕರ್ಮಯೋಗವೆನ್ನಬೇಕೋ, ಭಕ್ತಿಯೋಗವೆನ್ನಬೇಕೋ ಅಥವಾ ಜ್ಞಾನಯೋಗವೆನ್ನಬೇಕೋ ಎಂಬ ವಾದವು ಹುಟ್ಟುವುದಕ್ಕೂ ಇದೇಕಾರಣವು. ವಸ್ತುತಃ ಗೀತೆಯ ಯೋಗಕ್ಕೆ ಹೀಗೆ ಒಂದೇ ಒಂದು ಹೆಸರನ್ನು ಕೊಡುವದು ಸಾಧ್ಯವಿಲ್ಲ. ಏಕೆಂದರೆ, ಕೇವಲ ಶುಷ್ಕ ಕರ್ಮದಿಂದ ಮುಕ್ತಿಯೆಂದೂ ಅದು ಹೇಳುವುದಿಲ್ಲ, ಕೇವಲ ಬಣಜ್ಞಾನದಿಂದ ಮುಕ್ತಿಯೆಂದೂ ಅದು ಹೇಳುವುದಿಲ್ಲ, ಅಥವಾ ಮೂಢಭಕ್ತಿಯಿಂದ ಮುಕ್ತಿಯೆಂದೂ ಅದು ಹೇಳುವುದಿಲ್ಲ. ಆದ ಕಾರಣ, ಆ ಯೋಗಕ್ಕೆ ಒಂದೇ ಒಂದು ಹೆಸರನ್ನು ಕೊಡುವುದು ಉಚಿತವಲ್ಲ. ನಾವು ಈ ಗ್ರಂಥದಲ್ಲಿ, ಆ ತೊಡಕನ್ನು ಬೇರೆ ಬಗೆಯಾಗಿ ಬಿಡಿಸಲು ಯತ್ನಿಸಿರುತ್ತೇವೆ.

ಗೀತೆಯ ಮುಖ್ಯ ಶ್ಲೋಕವು ಯಾವುದು, ಅದರ ಯೋಗಕ್ಕೆ ಯಾವ ಒಂದು ಹೆಸರನ್ನು ಕೊಡಬೇಕು ಎಂಬುದನ್ನು ಹೇಳುವ ಗೋಜಿಗೆ ಹೋಗುವುದಿಲ್ಲ. ಗೀತೆಯು ಜಗತ್ತಿಗೆ ಕೊಟ್ಟಿರುವ ಮುಖ್ಯ ಸಂದೇಶವು ಯಾವುದು, ಹೇಳಿರುವ ಮುಖ್ಯ ಉಪದೇಶವು ಯಾವುದು, ಅಥವಾ ಆದೇಶವು ಯಾವುದು ಎಂಬುದನ್ನು ತಿಳಿಸಿ ಹೇಳುತ್ತೇವೆ. ಅದರ ಹೆಸರಿಗಿಂತಲೂ ಈ ತರಹದ ವಿವೇಚನೆಯೇ ಹೆಚ್ಚು ಮುಖ್ಯವಾದದ್ದು. ಮತ್ತು ಆ ಬಗ್ಗೆ ನಾವು ನಮ್ಮ ಸ್ವಕಪೋಲಕಲ್ಪಿತವಾದ ಆಧಾರಗಳನ್ನಾಗಲಿ, ಬಾಹ್ಯ ಅವತರಣಿಕೆಗಳನ್ನಾಗಲಿ, ಶ್ರುತಿಸ್ಮೃತಿಪುರಾಣಗಳ ವಚನಗಳನ್ನಾಗಲಿ ವಿಶೇಷವಾಗಿ ಕೊಡದೆ, ಕೇವಲ ಗೀತೆಯ ಶ್ಲೋಕಗಳ ಆಧಾರದಿಂದಲೇ ಆ ಸಂದೇಶವನ್ನು ಸಿದ್ಧಪಡಿಸುತ್ತೇವೆ. ವಾಚಕರಿಗೆ ಮುಖ್ಯವಾಗಿ ತಿಳಿದುಕೊಳ್ಳಬೇಕಾದುದು, ಒಟ್ಟಿನ ಮೇಲೆ ಗೀತೆಯು ಯಾವ ಮುಖ್ಯ ಮಾತನ್ನು ಉಪದೇಶಿಸುತ್ತದೆಂಬುದು; ಮಿಕ್ಕ ವಿಷಯಗಳೆಲ್ಲ ಗೌಣವಾದವುಗಳು.

ಈ ಮುಖ್ಯ ಮಾತನ್ನು ಕಂಡು ಹಿಡಿದು, ಅದನ್ನು ನಾವು ಸದಾ ಸ್ಮರಣೆಯಲ್ಲಿ ಇಟ್ಟುಕೊಂಡರೆ, ಗೀತೆಯಲ್ಲಿ ಹೇಳಿರುವ ಅನೇಕಾನೇಕ ಸೂಕ್ಷ್ಮತತ್ವಗಳನ್ನು ಮುಂದೆ ತಿಳಿದುಕೊಳ್ಳುವುದಕ್ಕೆ ಅನುಕೂಲವಾಗುತ್ತದೆ. ಗೀತಾಸಂದೇಶವು ಗೀತೆಯ ಮಹಾತಾತ್ಪರ್ಯವು. ಪದಕ್ಕೆ ಅದು ಪಲ್ಲವಿಯಿದ್ದಂತೆ. ಗೀತಾಸಮುದ್ರದಲ್ಲಿ ನಾವು ಎಷ್ಟು ಸುತ್ತಿ ಸುತ್ತಿ ಈಸಿ ಬಂದರೂ ಕೊನೆಗೆ ತಲುಪುವುದು ಈ ಸಂದೇಶಕ್ಕೆ. ಹಿಂದಿನ ಕಾವ್ಯಗಳಲ್ಲಿ, ಪ್ರತಿಯೊಂದು ಸಂಧಿಯ ಪ್ರಾರಂಭಕ್ಕೆ ಸಂಧಿಸೂಚನೆಯು ಕೊಡಲ್ಪಡುವ ಸಂಪ್ರದಾಯವಿತ್ತು. ಸಂಧಿಸೂಚನೆಯನ್ನೋದಿದ ಕೂಡಲೆ, ಆ ಸಂಧಿಯಲ್ಲಿ ಬಂದಿರುವ ಮುಖ್ಯ ವಿಷಯವು ಯಾವುದು ಎಂಬುದು ವಾಚಕರ ಲಕ್ಷ್ಯಕ್ಕೆ ತಟ್ಟನೆ ಬರುತ್ತಿತ್ತು. ಆ ಪ್ರಕಾರ ನಾವು ಈ ಗ್ರಂಥದಲ್ಲಿ ಮುಂದಿನ ನಮ್ಮ ಗ್ರಂಥಗಳ ಸಂಧಿಸೂಚನೆಯನ್ನು ಕೊಟ್ಟಿರುವೆವು. ಇದರಿಂದ, ಗೀತೆಯಲ್ಲಿ ಬಂದಿರುವ ಸಮಗ್ರವಿಷಯದ ಸಂಕ್ಷೇಪ ಚಿತ್ರವು ವಾಚಕರ ಕಣ್ಣಮುಂದೆ ಕಟ್ಟಲ್ಪಡುವುದರಿಂದ, ಮುಂದಿನ ವಿಷಯಗಳನ್ನು ತಿಳಿದುಕೊಳ್ಳುವುದಕ್ಕೆ ಅನುಕೂಲವಾಗುವುದು.

ಸಾರಾಂಶ, ನಾವು ಮುಂಚೆ ಗೀತಾಭವನದ ಸಾಮಾನ್ಯ ನೋಟ ವನ್ನು ದೂರಿನಿಂದ ತೋರಿಸಿ ನೆಟ್ಟಗೆ ವಾಚಕರಿಗೆ, ಆ ಮಂದಿರದೊಳಗೆ ಪ್ರತಿಷ್ಠಿತವಾದ ಮುಖ್ಯ ಮೂರ್ತಿಯ ದರ್ಶನವನ್ನು ಮಾಡಿಸುತ್ತೇವೆ.

———

### ೩ನೆಯ ಪ್ರಕರಣ

## ಗೀತೆಯ ಸಂದೇಶ

ಹಿಂದಿನ ಪ್ರಕರಣದಲ್ಲಿ, ಗೀತೆಯ ಮುಖ್ಯ ಸಂದೇಶವಾವುದೆಂಬು ದನ್ನು ತಿಳಿದುಕೊಳ್ಳುವುದು ಎಕೆ ಅವಶ್ಯವಿರುತ್ತದೆಂಬುದನ್ನು ಹೇಳಿದೆ ವಷ್ಟೆ. ಈ ಪ್ರಕರಣದಲ್ಲಿ, ಆ ಸಂದೇಶವಾವುದೆಂಬುದನ್ನು ಸಂಕ್ಷೇಪ ವಾಗಿ ಕೊಡುವೆವು.

ಆದರೆ, ಆ ಸಂದೇಶವಾವುದೆಂಬುದನ್ನು ಅರುಹುವ ಮುಂಚೆ, ವಾಚಕರ ನೆನಪಿಗೆ ಕೆಲವು ಮಾತುಗಳನ್ನು ಪುನಃ ತಂದುಕೊಡುವುದು ಒಳ್ಳೆಯದು. ಅವು ಯಾವುವೆಂದರೆ (೧) ನಮ್ಮ ಗೀತಾಪ್ರಕಾಶ ಗ್ರಂಥ ದಲ್ಲಿ ಹೇಳಿದಂತೆ,ಭಿನ್ನಭಿನ್ನ ಆಚಾರ್ಯರಲ್ಲಿಯೂ ಗೀತಾಪಂಡಿತರಲ್ಲಿಯೂ ಇರುವ ತೀಕ್ಷ್ಣವಾದ ಮತಭೇದವುಳ್ಳ ಪ್ರಶ್ನೆಗಳ ಮೇಲೆ ನಾವು ವಿಶೇಷವಾಗಿ ಭಾರಕೊಡುವುದಿಲ್ಲ. ಅವರೊಳಗಿನ ಮತೈಕ್ಯವುಳ್ಳ ಸಂಗತಿ ಗಳ ಕಡೆಗೆ ವಾಚಕರ ಲಕ್ಷ್ಯವನ್ನು ಹೆಚ್ಚಿಗೆ ಎಳೆಯುತ್ತೇವೆ. ಗೀತೆಯ ಸಂದೇಶವಾವುದೆಂಬುದನ್ನು ತೆಗೆಯುವ ವಿಷಯದಲ್ಲಿಯೂ ನಾವು ಅದೇ ಪದ್ಧತಿಯನ್ನು ಅವಲಂಬಿಸಿದ್ದೇವೆ. ಇದಕ್ಕೆ ಕಾರಣವೇನೆಂದರೆ, ನಮ್ಮ ಮುಖ್ಯ ಗುರಿಯು ಗೀತೆಯ ವಿಷಯವಾಗಿ ಒಮ್ಮತವಾಗಬಹುದಾದ ಸಂಗತಿಗಳನ್ನಾರಿಸಿ ವಾಚಕರ ಮುಂದೆ ಇಡುವುದು ಇರುತ್ತದೆ. (೨) ಎರಡನೆಯದೇನೆಂದರೆ, ಗೀತೆಯಲ್ಲಿ ಹೇಳಿದ ತತ್ವಗಳನ್ನು ಪ್ರತಿಯೊ ಬ್ಬನೂ ಹೇಗೆ ಆಚರಣೆಯಲ್ಲಿ ತರಬೇಕೆಂಬುದನ್ನು ಹೇಳುವುದು ಮಾತ್ರವೆ ನಮ್ಮ ಉದ್ದೇಶವಿರುವುದಲ್ಲದೆ, ಕೇವಲ ಬೌದ್ಧಿಕ ಬಡೆದಾಟವನ್ನು ಕೆದರಿ

ತೆಗೆಯುವುದು ಇರುವುದಿಲ್ಲ. ಅನೇಕ ಪಂಡಿತರೊಳಗೆ ಅನೇಕ ಸಂಗತಿಗಳ ಬಗ್ಗೆ ಅತ್ಯಂತ ತೀಕ್ಷ್ಣವಾದ ಮತಭೇದವಿರುತ್ತದೆಂಬುದು ನಮಗೆ ಗೊತ್ತುಂಟು. ಆ ಸಂಗತಿಗಳು ಒಂದು ದೃಷ್ಟಿಯಿಂದ ಅತ್ಯಂತ ಮಹತ್ವವುಳ್ಳ ಸಂಗತಿಗಳೆಂಬುದನ್ನೂ ನಾವು ಒಪ್ಪುತ್ತೇವೆ. ನಾವು ಯಾರಿಗೂ ಯಾವ ತಮ್ಮ ಅಭಿಪ್ರಾಯವನ್ನೂ ಬಿಡಹೇಳುವುದಿಲ್ಲ. ಯಾರಿಗೂ ಆ ಸಂಗತಿಗಳಿಗೆ ಕಡಿಮೆ ಬೆಲೆ ಕೊಡಿರೆಂದು ಆಗ್ರಹ ತೊಡುವುದಿಲ್ಲ. ಆದರೂ ಕೂಡ, ನಾವು ಕೊಡುವ ಗೀತಾಸಂದೇಶವು ಸರ್ವಸಾಮಾನ್ಯವಾಗಿ ಜನರು ಆಚರಣೆಯಲ್ಲಿ ತರಲಿಕ್ಕೆ ಯಾವ ಪಂಥವೂ ಯಾವ ಮತವೂ ಅಡ್ಡ ಬರಲಾರದೆಂದು ನಾವು ಹೇಳುತ್ತೇವೆ. ಅದು ಸಾಮಾನ್ಯವಾಗಿ ಎಲ್ಲರೂ ನಿಃಸಂದೇಹವಾಗಿ ಆಚರಣೆಯಲ್ಲಿ ತರಬಹುದಾದ ಸಂದೇಶವು. ಅದು ಹೀಗೆ ಏಕೆ ಮತ್ತು ಹೇಗೆ ಮಾನ್ಯವಾಗಬಹುದೆಂಬುದನ್ನು ತುಸು ವಿಸ್ತರಿಸುವೆವು.

ನಾವು ಗೀತಾಪ್ರಕಾಶ ಗ್ರಂಥದಲ್ಲಿ ತೋರಿಸಿದಂತೆ ೧೦-೧೨ ಸಂಗತಿಗಳ ಬಗ್ಗೆ ಎಲ್ಲರಲ್ಲಿಯೂ ಒಮ್ಮತವಿದೆ. ಭೇದವುಂಟಾಗಿರುವುದು ೧-೨ ಮಾತುಗಳ ಸಂಬಂಧದಿಂದ. ಅದೂ, ಮನುಷ್ಯನು ಸಂಪೂರ್ಣಜ್ಞಾನಿಯಾದ ಬಳಿಕ ಹೇಗೆ ವರ್ತಿಸಬೇಕೆಂಬ ಬಗ್ಗೆ. ಮನುಷ್ಯನು ಸಂಪೂರ್ಣಜ್ಞಾನಿಯಾದ ಬಳಿಕ (ಹಾಗೆ ಸಂಪೂರ್ಣಜ್ಞಾನವುಳ್ಳವರು ಎಷ್ಟು ಮಂದಿ?) ಆತನು ಕರ್ಮಸಂನ್ಯಾಸವನ್ನು ಮಾಡಬೇಕೋ ಅಥವಾ ಆಗ ಕೂಡ, ಕರ್ಮಯೋಗದ ಬೆನ್ನುಹತ್ತಬೇಕೋ ಎಂಬ ಬಗ್ಗೆ ಮತಭೇದವಿದೆ. ಹಾಗೆಯೇ, ನಿರ್ಗುಣಭಕ್ತಿಯು ಸಾಧ್ಯವಿದೆಯೋ ಇಲ್ಲವೋ ಎಂಬ ವಿಷಯದಲ್ಲಿಯೂ ಮತಭೇದವಿದೆ. ಆದರೆ ಸಾಮಾನ್ಯ ಜನರಿಗೆ ಇವೆರಡೂ ವಿಷಯಗಳು ಗೌಣವಿಷಯಗಳು. ಏಕೆಂದರೆ, ಸಂಪೂರ್ಣಜ್ಞಾನವನ್ನು ಗಳಿಸಿದ ಬಳಿಕ ಏನು ಮಾಡಬೇಕೆಂಬ ಪ್ರಶ್ನೆಯು ಈಗ ನಮಗೇಕೆ? ಅದೇ ಮೇರೆಗೆ, ನಿರ್ಗುಣಭಕ್ತಿಯನ್ನು ಮಾಡುವುದು ಸಾಧ್ಯವಿದೆಯೆಂದು ಒಂದು ಕ್ಷಣ ಕಲ್ಪಿಸಿದರೂ, ಅದಕ್ಕೆ ಅಧಿಕಾರವು ಸಿಕ್ಕಸಿಕ್ಕವರಿಗೆ ಉಂಟಾಗಲಾರದೆಂಬುದಂತೂ ನಿರ್ವಿವಾದವಾಗಿರುವುದಷ್ಟೆ. ಸಾರಾಂಶ, ಸಾಮಾನ್ಯತಃ ಪ್ರತ್ಯಕ್ಷ ಆಚರಣೆಯ ದೃಷ್ಟಿಯಿಂದ, ಈ

ಪ್ರಶ್ನೆಗಳಿಗೆ ಈಗ ವಿಶೇಷ ಮಹತ್ವವಿರುವುದಿಲ್ಲ. ಅವು ನಮಗೆ ಅಡ್ಡ ಬರುವುದಿಲ್ಲ. ಆದಕಾರಣ,

'ಅದ್ವೈತವ ನೆಲೆಗೊಳಿಸಿ, ಎರಡಳಿದೆನೆಂಬುದು, ಶಿಶು ಕಂಡ
ಕನಸಿನಂತಿರಬೇಕಲ್ಲದೆ, ನುಡಿದು ಹೇಳುವನ್ನಕ್ಕರ ಭಿನ್ನವಲ್ಲವೇ ಹೇಳಾ'

ಎಂದು ಶೂನ್ಯಸಂಪಾದನೆಯಲ್ಲಿ ಹೇಳಿದುದನ್ನು ಧ್ಯಾನದಲ್ಲಿಟ್ಟು ನಡೆಯ ಬೇಕು. ಸ್ವತಃ ಶ್ರೀಶಂಕರಾಚಾರ್ಯರೂ ಶ್ರೀರಾಮಾನುಜಾಚಾರ್ಯರೂ ಕೂಡ, ಇದಕ್ಕೆ ಒಪ್ಪುತ್ತಾರೆ. ಮನುಷ್ಯನು ಪರಮಾತ್ಮನಾಗುವ ಸ್ಥಿತಿಗೆ ಏರಿದಾಗ, ಅಥವಾ ಪರಮಾತ್ಮನಿಗೆ ಸರ್ವಸ್ವೀ ಶರಣು ಹೋಗಿ ಆತನಲ್ಲಿಯೇ ಸದಾ ತಲ್ಲೀನನಾಗುವ ಸ್ಥಿತಿಗೆ ಏರಿದಾಗ ಕರ್ಮಸಂನ್ಯಾ ಸವನ್ನು ಮಾಡಬೇಕೆಂದು ಶಂಕರ-ರಾಮಾನುಜರ ಅಭಿಪ್ರಾಯ. ಅದು ನಿಜವೋ ಅಲ್ಲವೋ ಎಂಬ ಪ್ರಶ್ನೆಯು ಈಗ ಬೇಡ. ಏಕೆಂದರೆ, ಸಾಮಾನ್ಯ ಜನರು ಗೀತೆಯ ಉಪದೇಶದಂತೆ, ತಮ್ಮ ಆಯುಷ್ಯದಲ್ಲಿ ಯಾವ ಆಚ ರಣೆಯನ್ನು ಆದರ್ಶವಾಗಿ ಇಟ್ಟುಕೊಳ್ಳಬೇಕೆಂಬುದನ್ನಷ್ಟೇ ನಾವು ಈ ಗ್ರಂಥದಲ್ಲಿ ನಿರ್ಧರಿಸಬೇಕಾಗಿರುತ್ತದೆ. ಆಗ, ಕರ್ಮಸಂನ್ಯಾಸವನ್ನು ಯಾರೂ ಹೇಳುವುದಿಲ್ಲ. ಅಷ್ಟು ನಮಗೆ ಸಾಕು. ಅರ್ಜುನನು ಅಜ್ಞಾ ನಿಯು, ಆದಕಾರಣ, ಆತನಿಗೆ ಶ್ರೀಕೃಷ್ಣನು ಗೀತೆಯಲ್ಲಿ ಕರ್ಮಸಂನ್ಯಾ ಸವನ್ನು ಹೇಳಲಿಲ್ಲವೆಂದು ಶಂಕರಾಚಾರ್ಯರ ಮತ. ಮನುಷ್ಯನು ಜ್ಞಾನಿಯೇ ಇರಲಿ, ಅಜ್ಞಾನಿಯೇ ಇರಲಿ, ಆತನು ಮುಂಚೆ ಕರ್ಮ ಯೋಗವನ್ನೇ ಆರಂಭಿಸಬೇಕೆಂದು ರಾಮಾನುಜಾಚಾರ್ಯರ ಅಭಿ ಪ್ರಾಯ. ಮಧ್ವ, ಟಿಳಕ, ಅರವಿಂದ ಮುಂತಾದವರಂತೂ ಅಜ್ಞಾನಿ ಗಳಿಗೂ ಜ್ಞಾನಿಗಳಿಗೂ ಇಬ್ಬರಿಗೂ ಕರ್ಮಯೋಗವು ಒಂದಿಲ್ಲೊಂದು ಕಾರಣದ ಸಲುವಾಗಿ ಇಷ್ಟವಾಗಿರುವುದೆಂದು ಅಭಿಪ್ರಾಯಪಡುವವರು. ಹೀಗೆ, ಕರ್ಮಸಂನ್ಯಾಸವನ್ನು ಯಾರೂ ಮೊದಲಿಗೆ ಉಪದೇಶಿಸುವುದಿಲ್ಲ ವೆಂದ ಬಳಿಕ ನಾವೆಲ್ಲರೂ ಈ ರಾಜಮಾರ್ಗದಲ್ಲಿ ನಿರ್ಭಯದಿಂದ ಸಾಗಿ ಹೋಗಲು ಅಡ್ಡಿ ಇಲ್ಲ. ಆದುದರಿಂದ, ಮನುಷ್ಯನು ಮುಕ್ತಿಯನ್ನು ಪಡೆಯುವ ಮಾರ್ಗಕ್ಕೆ ಹತ್ತಿದಾಗ, ಯಾವ ತರಹದ ಆಚರಣೆಯನ್ನಿಡ ಬೇಕೆಂಬುದರ ವಿಷಯವಾಗಿ ಗೀತೆಯ ಅಭಿಪ್ರಾಯವು ಏನಿರುತ್ತದೆಂಬು

ದನ್ನು ತಿಳಿದುಕೊಳ್ಳುವುದಕ್ಕೆ ಯಾವ ಪ್ರತ್ಯವಾಯವೂ ಇಲ್ಲ. ಇಷ್ಟೇ ಅಲ್ಲ, ಅದು ಅತ್ಯಂತ ಆವಶ್ಯಕವೂ ಆಗಿರುತ್ತದೆಂಬ ಮಾತು ಈಗ ವಾಚಕರ ಲಕ್ಷ್ಯಕ್ಕೆ ಬಂದಿರಲಿಕ್ಕೆ ಸಾಕು. ಮುಕ್ತಿಗೆ ಮುಟ್ಟುವುದಕ್ಕೆ ಇಡಲ್ಪಟ್ಟಿರುವ ನಿಚ್ಚಣಿಕೆಯು ಬಹುಶಃ ಒಂದೇ. ಕೆಲವರು ಕೆಲವು ಹಲ್ಲುಗಳನ್ನು ಹೆಚ್ಚಿಗೆ ಹಾಕಿರಬಹುದು; ಕೆಲವರು ಕೆಲವು ಹಲ್ಲುಗಳನ್ನು ಕಡಿಮೆ ಮಾಡಿರಬಹುದು. ಹಾಗು, ಕೆಲವರು, ಒಂದು ವಿಶಿಷ್ಟವಾದ ಮನಃಸ್ಥಿತಿಗೆ ಮನುಷ್ಯನು ಮುಟ್ಟಿದಾಗ ತಾನು ಯಾವ ನಿಚ್ಚಣಿಕೆಯಿಂದ ಮೇಲಕ್ಕೆ ಏರಿದನೋ ಆ ನಿಚ್ಚಣಿಕೆಯನ್ನು ಒದೆಯಲಿಕ್ಕೆ ಹೇಳಿರಬಹುದು. ಅದು ಈಗ ನಮಗೆ ಕರ್ತವ್ಯವಲ್ಲ. ಎಲ್ಲರೂ ಮುಂಚೆ ಆ ನಿಚ್ಚಣಿಕೆಯನ್ನು ನಮ್ಮೆದುರಿಗೆ ಇಟ್ಟುಕೊಳ್ಳುವ, ಮತ್ತು ಆ ನಿಚ್ಚಣಿಕೆಯನ್ನು ಏರತೊಡಗುವ.ಅದನ್ನು ಏರುವುದಕ್ಕೆ ಹೇಳುವ ದಾರಿ ಎಲ್ಲರದೂ ಒಂದೇ.

ಇರಲಿ; ಆ ಸಂದೇಶವಾವುದೆಂಬುದನ್ನು ನಾವು ನಮ್ಮ ಗೀತಾಪ್ರಕಾಶ ಗ್ರಂಥದಲ್ಲಿ ಕೊಟ್ಟೇ ಇರುವೆವು. ಅದನ್ನು ಇಲ್ಲಿ ನಾವು ವಾಚಕರ ಸ್ಮರಣೆಗೆ ತಂದುಕೊಡುತ್ತೇವೆ.

"ಸರ್ವವೂ ಭಗವದಧೀನವಾಗಿರುವುದರಿಂದ, ಸ್ವವಿಹಿತವೃತ್ತಿಯಿಂದಲೂ ಭಕ್ತಿಯಿಂದಲೂ ಭಗವದಾರಾಧನೆ ಮಾಡುವುದೇ ಪರಮ ಧರ್ಮವೆಂದೂ ತದ್ವಿರುದ್ಧವಾದುದೆಲ್ಲವೂ ಅಧರ್ಮವೆಂದೂ ಬೋಧಿಸುವುದೇ ಗೀತೆಯ ರಹಸ್ಯವು."

ಇದೊಂದು ಸಿದ್ಧಾಂತವನ್ನು ನಾವು ನಮ್ಮ ಎದೆಗೆ ಅವಚಿಕೊಂಡರೆ, ಇದೊಂದು ಉಪದೇಶದ ಮಾತನ್ನು ಮನಸ್ಸಿನಲ್ಲಿ ಗಂಟು ಹಾಕಿ ಇಟ್ಟುಕೊಂಡರೆ ಸಾಕು. ಮಿಕ್ಕ ಅನೇಕ ಸಂಗತಿಗಳನ್ನು ನಾವು ಕ್ಷಣ ಹೊತ್ತು ಮರೆತರೂ ಅಡ್ಡಿ ಇಲ್ಲ. ಆದಕಾರಣವೇ ನಾವು ಇದಕ್ಕೆ ಗೀತೆಯ ಸಂದೇಶವೆಂದು ಕರೆದಿದ್ದೇವೆ. ಇದರಲ್ಲಿ ಕೆಳಗೆ ಬರೆದ ಪ್ರಮೇಯಗಳು ಅಡಕವಾಗುತ್ತವೆ. ಅವು ಯಾವುವೆಂದರೆ—

(೧) ಸರ್ವವೂ ಭಗವದಧೀನವಿರುತ್ತದೆ.

(೨) ಆದಕಾರಣ, ಸ್ವವಿಹಿತವೃತ್ತಿಯನ್ನು ಅವಲಂಬಿಸಬೇಕು.

(೩) ಪರಮಾತ್ಮನಲ್ಲಿ ಭಕ್ತಿಯುಳ್ಳವನಾಗಿ ಆ ಸ್ವವಿಹಿತವೃತ್ತಿಯನ್ನು ಕೈಕೊಳ್ಳಬೇಕು.

(೪) ಹಾಗೆ ಭಕ್ತಿಯಿಂದ ಕರ್ತವ್ಯವನ್ನು ಮಾಡುವಾಗ, ಅದು ಭಗವದಾರಾಧನೆಯೆಂಬ ಉಚ್ಚಭಾವನೆಯನ್ನು ಮನಸ್ಸಿನಲ್ಲಿ ತಾಳಿರಬೇಕು.

(೫) ಇಂಥ ಆಚರಣೆಯನ್ನಿಡುವುದೇ ಯಾವತ್ತು ಧರ್ಮಗಳಲ್ಲಿ ಹೆಚ್ಚಿನ ಧರ್ಮವು.

(೬) ಆ ಆಚರಣೆಗೆ ವಿರುದ್ಧವಾದುದೆಲ್ಲವೂ ಅಧರ್ಮವು.

ಇವಿಷ್ಟು ಪ್ರಮೇಯಗಳನ್ನು ಗೀತೆಯ ಆಧಾರದಿಂದ ಸಿದ್ಧಪಡಿಸುವುದೇ ಈ ಗ್ರಂಥದ ಮುಖ್ಯ ಉದ್ದೇಶವು ಗೀತೆಯಲ್ಲಿ ಬಂದಿರುವ. ಮಿಕ್ಕ ವಿಷಯಗಳೆಲ್ಲವೂ ಇವಿಷ್ಟು ಪ್ರಮೇಯಗಳನ್ನು ಪುಷ್ಟೀಕರಿಸುವುದಕ್ಕೋಸ್ಕರ ಇರುತ್ತವೆ. ಮಿಕ್ಕ ಅನೇಕ ಮಾತುಗಳಲ್ಲಿ ಮತಭೇದವಿದ್ದಾಗ್ಯೂ ಮೇಲ್ಕಾಣಿಸಿದ ಪ್ರಮೇಯಗಳ ಬಗ್ಗೆ ಎಲ್ಲಿಯವರೆಗೆ ಐಕಮತ್ಯವಾಗುವ ಸಂಭವವಿದೆಯೋ (ಹಾಗೆ ಸಂಭವವಿದೆಯೆಂದು ನಮಗೆ ನಂಬಿಗೆಯುಂಟು.) ನಾವು ಮಿಕ್ಕ ಮತಭೇದಗಳನ್ನು ಲೆಕ್ಕಿಸುವ ಕಾರಣವಿಲ್ಲ.

ಇವೆಲ್ಲ ಸಿದ್ಧಾಂತಗಳು ಒಟ್ಟುಗೂಡಿದರೆ ಮಾತ್ರವೇ ಗೀತಾ ಸಂದೇಶವಾಗುತ್ತದೆಂಬುದನ್ನು ವಾಚಕರು ಮರೆಯಬಾರದು. ಅವನ್ನು ಒಂದೊಂದನ್ನೇ ತೆಗೆದುಕೊಂಡರೆ ಮಹತ್ವವಿಲ್ಲ.ಜಗತ್ತೆಲ್ಲವೂ ಭಗವಂತನ ಆಧೀನವಿರುತ್ತದೆಂಬುದನ್ನು ತಿಳಿದವನು, ಮಿಕ್ಕ ಪ್ರಮೇಯಗಳನ್ನು ದುರ್ಲಕ್ಷಿಸಿ, ತನ್ನ ಮನದಂತೆ ಆಚರಿಸಬಹುದೆಂದು ಗೀತೆಯು ಹೇಳುವುದಿಲ್ಲ. ನಾವೇನು ಜ್ಞಾನಿಗಳು, ನಮಗೆ ಆಚಾರ ನಿರ್ಬಂಧವಿಲ್ಲವೆಂದೆನ್ನುವವರಿಗೆ ಗೀತೆಯು ಆಸ್ಪದ ಕೊಡುವುದಿಲ್ಲ. ಹಾಗೆಯೇ, ನಾವು ನಮ್ಮ ವಿಹಿತವೃತ್ತಿಯನ್ನು ಎಂದರೆ ಕರ್ತವ್ಯಕರ್ಮವನ್ನು ಮಾಡಿದರಾಯಿತು, ಆ ಬಳಿಕ ದೇವರ ಹಂಗು ನಮಗೇನು ಎಂದು ವಾದಿಸುವವರನ್ನೂ ಗೀತೆಯು ಎತ್ತಿ ಹಿಡಿಯುವುದಿಲ್ಲ. 'ನಾ ಮಾಡಿದ ಕರ್ಮ ಬಲ

ವಂತವಾದರೆ ನೀ ಮಾಡುವುದೇನು ಹರಿಯೇ' ಎಂಬುದನ್ನು ಹೇಳಿಸ
ಜನರು ಬೇರೆ ಅರ್ಥದಲ್ಲಿ ನುಡಿಯುತ್ತಾರೆ. ಗೀತೆಯು ಇಂಥವರನ್ನು
ನಿಂದಿಸುತ್ತದೆ. ಸಾರಾಂಶ, ಕೇವಲ ಜ್ಞಾನವೊಂದೇ ಸಾಕು, ಕರ್ಮಭಕ್ತಿ
ಗಳು ಬೇಡವೇಬೇಡವೆಂದೆನ್ನುವವರನ್ನೂ, ಕೇವಲ ಭಕ್ತಿಯೊಂದೇ ಸಾಕು,
ಜ್ಞಾನಕರ್ಮಗಳ ಅವಶ್ಯಕತೆಯಿಲ್ಲವೆಂದೆನ್ನುವವರನ್ನೂ ಮತ್ತು, ಕೇವಲ
ಕರ್ಮವೊಂದಿದ್ದರೆ ಸಾಕು, ಜ್ಞಾನಭಕ್ತಿಗಳಿಲ್ಲದಿದ್ದರೂ ಸಾಗುವದೆಂಬು
ವವರನ್ನೂ ಗೀತೆಯು ದೂರದಲ್ಲಿ ಇಡುತ್ತದೆ. ಅವರ ಉಪದೇಶವು ಏಕ
ದೇಶೀಯವಾದ ಉಪದೇಶವೆಂದು ಗೀತೆಯ ಅಭಿಪ್ರಾಯವು. ಒಟ್ಟಿನಲ್ಲಿ
ಹೇಳುವುದೇನಂದರೆ, ಮೇಲಕ್ಕಾಣಿಸಿದ ಪ್ರಮೇಯಗಳೆಲ್ಲವೂ ಕೂಡಿದರೆ
ಗೀತಾಸಂದೇಶವಾಗುತ್ತದೆ. ಇಲ್ಲದಿದ್ದರೆ ಇಲ್ಲ. ಆ ಪ್ರಮೇಯಗಳನ್ನು
ಸೂಕ್ಷ್ಮವಾಗಿ ಅವಲೋಕಿಸಿದರೆ, ಅವುಗಳಲ್ಲಿ ಕರ್ಮ ಜ್ಞಾನ ಮತ್ತು
ಭಕ್ತಿ ಇವು ಮೂರೂ ಮಿಲಿತವಾಗಿರುತ್ತವೆಂದು ಕಂಡುಬರುವುದು.
ಮುಮುಕ್ಷುಗಳಿಗೆ ಎಲ್ಲಕ್ಕೂ ಮುಂಚೆ ಬೇಕಾದುದು ಜ್ಞಾನವು. ಜಗ
ತ್ತೆಲ್ಲವೂ ಪರಮಾತ್ಮನ ಅಧೀನವಾಗಿರುತ್ತದೆಂಬ ತತ್ವವು ಕೇವಲ ಬುದ್ಧಿ
ಯಿಂದ ಮಾತ್ರವೇ ಗ್ರಹಣ ಮಾಡಲ್ಪಟ್ಟರಲ್ಲ. ಅದು ಅನುಭವದಲ್ಲಿ ಇಳಿ
ಯಬೇಕು. ಹಾಗಾದರೆ ಮಾತ್ರವೇ, ಮನುಷ್ಯನು ಯಾವುದೇ ಕರ್ಮ
ಮಾಡಿದ್ದಕ್ಕೂ ಸಾರ್ಥಕವಿದೆ. ಹಾಗೆಯೇ, ಸರ್ವವೂ ಭಗವದಧೀನ
ವೆಂಬ ಜ್ಞಾನವು ಇತ್ತು, ಆದರೆ ಮನುಷ್ಯನು ತನ್ನ ಕರ್ತವ್ಯವನ್ನು
ಮಾಡುವುದನ್ನು ಬಿಟ್ಟನು, ಎಂದರೆ ಗೀತೆಯಲ್ಲಿ ಹೇಳಿದಂತೆ ಜಗತ್ತೆಲ್ಲವೂ
ಹಾಳಾಗುವುದು. ಹಾಗೆ ಮಾಡಿದರೆ ಜಗತ್ತಿನ ಆಟವೆಲ್ಲವೂ–ಜಗತ್ತಿನ
ಲೀಲೆಯೆಲ್ಲವೂ ನಿಂತುಹೋಗಬೇಕಾದೀತಲ್ಲ! ಜ್ಞಾನವೂ ಇತ್ತು,
ಕರ್ಮವನ್ನೂ ಮಾಡಿದನು, ಆದರೆ ದೇವರಲ್ಲಿ ವಿಶ್ವಾಸವಿದ್ದಿಲ್ಲ. ಅಂಥವ
ನನ್ನು ತೆಗೆದುಕೊಂಡು ಮಾಡುವುದೇನು? ಅಂಥವನಿಗೆ ಗೀತೆಯು
ಏನೂ ಬೆಲೆ ಕೊಡುವುದಿಲ್ಲ. ಸಾರಾಂಶ, ಮನುಷ್ಯನಲ್ಲಿ ಮೊದಲಿನಿಂದಲೂ
ಇವು ಮೂರೂ ಗುಣಗಳು ಅಂಕುರಿತವಾಗಿರಬೇಕು. ಮುಂದೆ ಅವುಗಳ
ಸ್ವರೂಪವು ಬೆಳೆಯುತ್ತ ಬೆಳೆಯುತ್ತ ಅವು ಪೂರ್ಣ ಸುಸಂಸ್ಕೃತ
ಸ್ವರೂಪವನ್ನು ಹೊಂದಬೇಕು. ಈ ಒಟ್ಟು ಮಾತನ್ನು ವಾಚಕರು

ಎಂದಿಗೂ ಮರೆಯಬಾರದು. ಮತ್ತು, ಅದೃಷ್ಟ ಅಥವಾ ಇಲ್ಲದ ಸಲ್ಲದ ವಾದಗಳಿಗೆ ಇಂಬುಗೊಡಬಾರದು. ಲೋಕಕ್ಕೆ ಈ ಸಿದ್ಧಾಂತ ವನ್ನು ಉಪದೇಶಿಸುವುದು ಶ್ರೀಕೃಷ್ಣನ ಮುಖ್ಯ ಉದ್ದೇಶ. ಜಗತ್ತಿಗೆ ಈ ಸಂದೇಶವನ್ನು ಸಾರುವುದು ಗೀತೆಯ ಮುಖ್ಯ ಗುರಿ. ಸರ್ವರಿಗೂ ಈ ಆದೇಶವನ್ನು ಬೀರುವುದು ವ್ಯಾಸರ ಜೀವಿತ ಕಾರ್ಯ. ಗಾಣಿಗನ ಎತ್ತುಗಳು ಹೇಗೆ ಯಾವಾಗಲೂ ಗಾಣದ ಸುತ್ತಲೂ ತಿರುಗುತ್ತವೆಯೋ ಹಾಗೆ, ಗೀತೆಯೊಳಗಿನ ಅನೇಕ ವಿಷಯಗಳೆಲ್ಲವೂ ಇದೊಂದು ಮಹಾ ತತ್ವದ ಸುತ್ತಲೂ ತಿರುಗುತ್ತವೆ. ಈ ತತ್ವವು ಗೀತೆಗೆ ಮೇಟಿಯಿದ್ದಂತೆ. ಈ ಮೇಟಿಯನ್ನು ನಡುವೆ ಇಟ್ಟುಕೊಂಡೇ, ಗೀತೆಯ ಅಭ್ಯಾಸವನ್ನು ಮಾಡುವ ಎತ್ತುಗಳು ತಿರುಗಬೇಕು. ಈ ಉಪದೇಶವು ಧ್ರುವನಕ್ಷತ್ರ ವಿದ್ದಂತೆ. ಇದನ್ನು ಕಣ್ಣಮುಂದೆ ಇಟ್ಟುಕೊಂಡು ಸಾಗಿದರೆ, ನಾವು ಎಲ್ಲಿಯೂ ದಾರಿ ತಪ್ಪಿ ಹೋಗುವ ಸಂಭವವಿಲ್ಲ. ಇಲ್ಲದಿದ್ದರೆ ಮಾತ್ರ ನಡುಮಡುವಿನಲ್ಲಿ ಮುಳುಗುವ ಅಂಜಿಕೆಯುಂಟು.ಏಕೆಂದರೆ ಗೀತೆಯು ಕೇವಲ ತತ್ವಜ್ಞಾನದೃಷ್ಟಿಯಿಂದ ಬರೆದ ಗ್ರಂಥವಲ್ಲ. ಅದು ಸಂವಾದಾ ತ್ಮಕ ಗ್ರಂಥವು. ಆದ ಕಾರಣ, ಅಂಥ ಗ್ರಂಥಗಳೊಳಗಿನ ಗುಣದೋಷ ಗಳೆರಡೂ ಅದರಲ್ಲಿ ಸೇರಿರುತ್ತವೆ. ಅರ್ಜುನನು ಪ್ರಶ್ನೆ ಕೇಳತಕ್ಕದ್ದು, ಶ್ರೀಕೃಷ್ಣನು ಆತನ ಸಂದೇಹಗಳಿಗೆ ಉತ್ತರ ಕೊಡತಕ್ಕದ್ದು. ಪ್ರಶ್ನೆ ಕೇಳದಿದ್ದರೂ ಕೂಡ, ಅರ್ಜುನನ ಮನದಲ್ಲಿ ಬಂದಿರಬಹುದಾದ ಅನೇಕ ಸಂದೇಹಗಳನ್ನು ತಾನಾಗಿಯೇ ಊಹಿಸಿಕೊಂಡು, ಶ್ರೀಕೃಷ್ಣನು ಅನೇಕ ಸಲ, ಆತನಿಗೆ ಉತ್ತರ ಕೊಡುತ್ತ ಹೋಗಿರುವನು. ಗೀತೆಯಲ್ಲಿ ಅರ್ಜುನನು ಪ್ರತ್ಯಕ್ಷವಾಗಿ ಕೇಳಿದ ಪ್ರಶ್ನೆಗಳು ಎಷ್ಟು ಸ್ವಲ್ಪ ಇರುತ್ತ ವೆಂಬುದರ ಮೇಲಿಂದ ಈ ಮಾತು ಸ್ಪಷ್ಟವಾಗುವುದು. ಸಾಮಾನ್ಯ ವಾಗಿ ಅರ್ಜುನನು ಸ್ಪಷ್ಟವಾಗಿ ಕೇಳಿದ ಪ್ರಶ್ನೆಗಳು ೨೦–೨೫ ಕ್ಕೆ ಮಿಕ್ಕಿ ರುವುದಿಲ್ಲ. ಮಿಕ್ಕಲ್ಲೆಲ್ಲ ಶ್ರೀಕೃಷ್ಣನು ಕೊಡುತ್ತ ಹೋಗಿರುವ ಉತ್ತರ ಗಳ ಮೇಲಿಂದಲೇ ಅರ್ಜುನನ, ಅರ್ಥಾತ್, ಪ್ರತಿಯೊಬ್ಬನ ಮನದಲ್ಲಿ ಹುಟ್ಟಿರಬಹುದಾದ ಶಂಕೆಗಳನ್ನು ನಾವು ಊಹಿಸಬೇಕಾಗುತ್ತದೆ. ಮತ್ತು, ಮತಭೇದಕ್ಕೆ ಅವಕಾಶವುಂಟಾಗಿರುವುದು ಇದೇಕಾರಣದ

ಸಲುವಾಗಿ ಇರಲಿ. ಇಲ್ಲಿ ಹೇಳತಕ್ಕ ಮಾತೇನೆಂದರೆ ನಾವು ಮೇಲ್ಕಾಣಿಸಿದ ಗೀತಾಸಂದೇಶವನ್ನು ಸಿದ್ಧಗೊಳಿಸುವಾಗ, ಗೀತೆಯಲ್ಲಿಯ ಸಂವಾದಾತ್ಮಕ ಪದ್ಧತಿಯನ್ನವಲಂಬಿಸಿರದೆ, ಅದಕ್ಕೆ ವಿರುದ್ಧವಾದ ಪದ್ಧತಿಯನ್ನು ಅವಲಂಬಿಸಿರುತ್ತೇವೆ. ಸಂದೇಹಗಳುಂಟಾದಂತೆ ಉತ್ತರ ಕೊಡುತ್ತ ಹೋಗದೆ ಮುಖ್ಯ ಸಿದ್ಧಾಂತಗಳಾವುವು, ಆ ಮುಖ್ಯ ಸಿದ್ಧಾಂತಗಳೆಂಬುದಕ್ಕೆ ಗೀತೆಯೊಳಗಿನ ಯಾವ ಮುಖ್ಯ ಶ್ಲೋಕಗಳು ಪ್ರಮಾಣಗಳು ಎಂಬುದನ್ನು ಮಾತ್ರವೇ ಹೇಳುತ್ತೇವೆ. ಸಾರಾಂಶ, ಗೀತೆಯ ಸಮಗ್ರಸಾರವನ್ನು ಮುಂಚೆ ಇಲ್ಲಿ ಕೊಟ್ಟಿರುವೆವು. ವಾಚಕರಿಗೆ ಮೊದಲು ಮುಖ್ಯ ಮಾತು ಯಾವುದೆಂಬುದು ಅರಿಕೆಯಾಯಿತೆಂದರೆ, ಮಿಕ್ಕ ಸೂಕ್ಷ್ಮ ವಿಷಯಗಳನ್ನು ತಿಳಿದುಕೊಳ್ಳುವುದು ಸುಲಭವಾಗುತ್ತದೆ. ಅರ್ಜುನನಂಥ ಬುದ್ಧಿವಂತನು ಕೂಡ, ಶ್ರೀಕೃಷ್ಣನ ಉಪದೇಶದ ನಿಜವಾದ ಮರ್ಮವನ್ನರಿಯದೆ ಮೇಲಿಂದ ಮೇಲೆ ಹೇಗೆ ಗೊಂದಲದಲ್ಲಿ ಬಿದ್ದಿರುವನೆಂಬುದನ್ನು ನೋಡಿದರೆ ನಾವು ಕೈಕೊಂಡ ಈ ಪದ್ಧತಿಯ ಬೆಲೆ ಗೊತ್ತಾಗುವುದು. ಅರ್ಜುನನ ಮೂಲ ಪ್ರಶ್ನೆಯೇನೋ ಬಲು ಚಿಕ್ಕದು, ಸಾಮಾನ್ಯವಾದುದು, ಸರಳವಾದುದು. ಬಾಂಧವರಾದ ದುರ್ಯೋಧನಾದಿಗಳನ್ನು ಕೊಂದು ಗಳಿಸಿದ ರಾಜ್ಯದಿಂದ ನಮಗುಂಟಾಗುವ ಪುರುಷಾರ್ಥವೇನು ಎಂಬುದು. ಈ ಪ್ರಶ್ನೆಯನ್ನು ಕೇಳುವುದೊಂದೇ ತಡ, ಶ್ರೀಕೃಷ್ಣನು ಅರ್ಜುನನನ್ನು ಒಮ್ಮೆಲೆ ವೇದಾಂತಸಾಗರದಲ್ಲಿ ಧುಮುಕಿಸಿಯೇ ಬಿಡುತ್ತಾನೆ! ಜೀವವೆಂದರೇನು ಅದು ಏಕೆ ನಿತ್ಯವು ಇವೇ ಮುಂತಾದ ಗಹನ ವಿಷಯಗಳಿಂದಲೇ ಉತ್ತರ ಕೊಡುವುದಕ್ಕೆ ಪ್ರಾರಂಭಿಸಿದ್ದಾನೆ. ಅರ್ಜುನನನ್ನು ಮುಂಚೆ ವೇದಾಂತ ಸಮುದ್ರದಲ್ಲಿ ನೂಕಿಸಿ, ಅವನ ಕೈಹಿಡಿದು ಆತನಿಗೆ ಈಸನ್ನು ಕಲಿಸಿ, ಕೊನೆಗೆ ದಡಕ್ಕೆ ತಂದು ತಲುಪಿಸುತ್ತಾನೆ. ಗೀತೆಯು ಬಿರುಗಾಳಿಯಿಂದ ಅಲ್ಲೋಲಕಲ್ಲೋಲವಾದ ಮಹಾಸಮುದ್ರದಂತೆ ನೋಡಲಿಕ್ಕೇನೋ ಅತಿರಮ್ಯವಾಗಿದೆ, ಗಂಭೀರವಾಗಿದೆ! ಆ ಸಮುದ್ರದಲ್ಲಿ ಒಂದರ ಮೇಲೊಂದು ತೆರೆಗಳು ಘೋರ್ಗರೆಯುತ್ತ ಬರುತ್ತವೆ. ಅವುಗಳ ಸೆಳವಿನಲ್ಲಿ ಸಿಕ್ಕು ಅರ್ಜುನನು ಒದ್ದಾಡುತ್ತಾನೆ. ಅದರೊಳಗಿಂದ ಎತ್ತಲು

ಶ್ರೀಕೃಷ್ಣನನ್ನು ಬೇಡಿಕೊಳ್ಳುತ್ತಾನೆ. ಎತ್ತುವಷ್ಟರಲ್ಲಿ, ಮತ್ತೊಂದು ತೆರೆಯು ಬಂದು ಆತನನ್ನು ಅಪ್ಪಳಿಸಿ, ಮುಳುಗಿಸಹತ್ತುತ್ತದೆ ! ಮಧ್ಯದಲ್ಲಿ, ಅರ್ಜುನನು ಗುಟಕರಿಸಹತ್ತುತ್ತಾನೆ ! ಆದರೆ ಅಷ್ಟರಲ್ಲಿ, ಶ್ರೀಕೃಷ್ಣನು ಆತನನ್ನು ಮುಳುಗಗೊಡದೆ, ಮೇಲಕ್ಕೆತ್ತುತ್ತಾನೆ ಈ ಬಗೆಯ ನೋಟವು ನೋಡಲಿಕ್ಕೆ ಎಷ್ಟು ಅಂದವಾಗಿದೆ! ಆದರೆ, ಅರ್ಜುನನಂತೆ ನಮಗೆ ಸಾಹಸ ಮಾಡುವ ಸಾಮರ್ಥ್ಯವಿದೆಯೆ ? ಶ್ರೀಕೃಷ್ಣನಂಥ ಕೈವಾರಿಯು ನಮಗೆ ಇರುವನೇ ? ಆದುದರಿಂದ, ನಮ್ಮಂಥವರು ಹೀಗೆ ಈಸಗುಂಬಳಕಾಯಿಯನ್ನು ಕಟ್ಟಿಕೊಂಡೇ ಈಸುಗಲಿಯಬೇಕು.

ನಾವು ಮೇಲೆ ಕೊಟ್ಟಿರುವ ಗೀತಾಸಂದೇಶವೇ ಆ ಈಸಗುಂಬಳಕಾಯಿಯು. ಇದನ್ನು ಕಟ್ಟಿಕೊಂಡು ಗೀತಾಸಮುದ್ರದಲ್ಲಿ ಈಸುಬಿದ್ದರೆ ಭಯವಿಲ್ಲ. ಈ ವಿವೇಚನೆಯಿಂದ, ಗೀತೆಯು ಕಾಣುವಷ್ಟು ಸುಲಭ ಗ್ರಂಥವಲ್ಲವೆಂಬುದು ವಾಚಕರ ಲಕ್ಷ್ಯಕ್ಕೆ ಬಂದಿರಲಿಕ್ಕೆ ಸಾಕು. ಶ್ರೀಕೃಷ್ಣನು ಅದು ಸುಲಭ ಗ್ರಂಥವೆಂದು ತಿಳಿಸಿರಲಿಲ್ಲ. ಬಾವಿಕೆರೆಗಳಿಂದುಂಟಾಗುವ ಪ್ರಯೋಜನವು ಎಲ್ಲೆಡೆಯಲ್ಲಿಯೂ ತುಂಬಿದ ಮಹಾಸಮುದ್ರದಿಂದುಂಟಾಗುವುದಿಲ್ಲವೇ (೨.೪೬) ಎಂದು ಶ್ರೀಕೃಷ್ಣನು ಮತ್ತೊಂದು ಸಂದರ್ಭದಲ್ಲಿ ಹೇಳಿದುದನ್ನು ಇಲ್ಲಿ ಅನ್ವಯಿಸಿಕೊಂಡು, ಗೀತಾಸಮುದ್ರದೊಳಗಿಂದ ಅವರವರು ಅವರವರ ಯೋಗ್ಯತೆಗೆ ತಕ್ಕಂತೆ ನೀರು ಸೇದಿಕೊಳ್ಳಬಹುದೆಂದು ಹೇಳಬಹುದು. ಆದುದರಿಂದಲೇ, ಗೀತೆಯನ್ನು ಗುಹ್ಯಶಾಸ್ತ್ರ (೧೫.೨೦) ರಾಜಗುಹ್ಯ (೯.೨ ) ಪರಮಗುಹ್ಯ (೧೮.೬೩) ಸರ್ವಗುಹ್ಯತಮ (೧೮.೬೪) ಎಂಬಿವೇ ಮುಂತಾದ ಗಂಭೀರ ಶಬ್ದಗಳಲ್ಲಿ ಅವನು ಉಲ್ಲೇಖಿಸಿರುವನು. ಇರಲಿ.

ಯಾವ ರಾಜಮಾರ್ಗವನ್ನು ಹಿಡಿಯಬೇಕೆಂದು ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸಿರುವನೋ, ಮತ್ತು ಅದಕ್ಕನುಸರಿಸಿ, ಯಾವ ರಾಜಮಾರ್ಗವನ್ನು ಆತನು ಹಿಡಿದಿರುವನೋ ಆ ಮಾರ್ಗವನ್ನು ನಾವೆಲ್ಲರೂ ನಿರಾತಂಕವಾಗಿ ಅನುಸರಿಸಬಹುದಲ್ಲವೆ ? ಸ್ವತಃ ಶಂಕರ-ರಾಮಾನುಜ–ಮಧ್ವ ಮುಂತಾದವರು ಯಾವ ಬಗೆಯ ಆಚರಣೆಯನ್ನು ಪ್ರತ್ಯಕ್ಷವಾಗಿ ಅವಲಂಬಿಸಿದರೋ, ಮತ್ತು ಯಾವ ಬಗೆಯ ಉಪಾಸನೆಯನ್ನು

ಕೈಕೊಂಡರೋ ಅದನ್ನು ನಾವೆಲ್ಲರೂ ಹಿಂಬಾಲಿಸುವುದರಿಂದ ನಮಗೆ ಹಾನಿಯಿಲ್ಲವಷ್ಟೇ. ಗೀತೆಯಲ್ಲಿ ಸೂರ್ಯ,ಮನು, ಇಕ್ಷ್ವಾಕು,ಜನಕ, ಪ್ರಿಯವ್ರತಾದಿಗಳು ಅನುಸರಿಸಿದರೆಂದು ಹೇಳಿದ ಮಾರ್ಗವನ್ನು ನಾವು ಅನುಸರಿಸಲು ಯಾವ ಭಯವಿದೆ? ಇಷ್ಟೇ ಅಲ್ಲ. ಆಪ್ತಕಾಮನಾದ ಶ್ರೀ ಕೃಷ್ಣನು ತನಗೆ ಯಾವ ತರಹದ ಪ್ರಯೋಜನವಿಲ್ಲದಿದ್ದರೂ ಲೋಕಕ್ಕೆ ಮೇಲ್ಪಂಙ್ತಿಯನ್ನು ಹಾಕಿಕೊಡುವ ಸಲುವಾಗಿ, ಯಾವ ತರಹದ ಆಚರಣೆಯನ್ನವಲಂಬಿಸಿದನೋ, ಅದನ್ನು ನಿಃಸಂದೇಹವಾಗಿ ಏಕಮತ್ಯ ದಿಂದ ಆಚರಿಸುವುದು ನಮ್ಮೆಲ್ಲರ ಆದ್ಯಕರ್ತವ್ಯವೇ ಆಗಿಲ್ಲವೋ? ಆಗಿದೆ, ಆಗಿದೆ, ಆಗಿದೆ ಎಂದು ಮೂರು ಸಲ ಮುಕ್ತಕಂಠದಿಂದ ಸಾರಬಹುದು. ಅಂಥ ಆಚರಣೆಯೆಂದರೆ, ನಾವು ಕೊಟ್ಟಿರುವ ಗೀತಾಸಂದೇಶದಲ್ಲಿ ಹೇಳಿ ದಂತೆ ಆಚರಿಸುವುದು. ಆದಕಾರಣ, ಸರ್ವರೂ ಈ ಗೀತಾಸಂದೇಶದ ಸಂಪೂರ್ಣ ಮರ್ಮವನ್ನರಿತು ಸಂದೇಶದ ಸಾರವನ್ನುಂಟಿಸಿ ಸುಖ ಪಡಲಿ!

---

## ೪ನೆಯ ಪ್ರಕರಣ

# ಗೀತೆಯ ರಚನೆ

ಹೋದ ಪ್ರಕರಣದಲ್ಲಿ ಕೊಟ್ಟಿರುವ ಗೀತಾಸಂದೇಶದೊಳಗಿನ ಮುಖ್ಯ ಪ್ರಮೇಯಗಳನ್ನು ಗೀತೆಯ ಆಧಾರದಿಂದ ವಿಸ್ತಾರಗೊಳಿಸುವ ಪೂರ್ವದಲ್ಲಿ, ನಾವು ನಮ್ಮ ವಾಚಕರನ್ನು ಗೀತಾಮಂದಿರದಲ್ಲಿ ಕರೆದು ಕೊಂಡು ಹೋಗಿ, ಆ ಭವನದ ಸಾಮಾನ್ಯ ರಚನೆಯನ್ನು ಅವರ ಕಣ್ಣಿಗೆ ಹಾಕುವೆವು; ಮತ್ತು, ಗೀತಾಸಂದೇಶಕ್ಕೆ ಬೇಕಾಗುವ ಮುಖ್ಯ ಭಾಗ ವಾವುದೆಂಬುದನ್ನು ತೋರಿಸುವೆವು. ಹೀಗೆ ಮಾಡಿದರೆ, ನಾವು ಮುಂದೆ ವಿವರಿಸುವ ಗೀತಾಸಂದೇಶವನ್ನು ತಿಳಿದುಕೊಳ್ಳುವುದಕ್ಕೆ ಹೆಚ್ಚಿಗೆ ಅನು ಕೂಲವಾಗುತ್ತದೆ.

ಗೀತೆಯಲ್ಲಿ ಒಟ್ಟು ೧೮ ಅಧ್ಯಾಯಗಳಿದ್ದುದು ಎಲ್ಲರಿಗೂ ಗೊತ್ತಿದ್ದ ಮಾತು. ಈ ೧೮ ಅಧ್ಯಾಯಗಳನ್ನು ಸ್ಥೂಲವಾಗಿ ಮೂರು ಭಾಗಗಳಲ್ಲಿ ವಿಂಗಡಿಸಬಹುದು ಮೊದಲಿನ ಆರು ಅಧ್ಯಾಯಗಳಲ್ಲಿ, ಜ್ಞಾನಕ್ಕೆ ಸಾಧನಗಳಾದ ಕರ್ಮಯೋಗ ಮತ್ತು ಧ್ಯಾನಯೋಗ ಇವು ಬಂದಿವೆ. ೫ನೆಯ ಅಧ್ಯಾಯದ ಕೊನೆಯವರೆಗೆ ಕರ್ಮಯೋಗವು ಬಂದಿದ್ದು ೬ ನೆಧ್ದ ರಲ್ಲಿ ಧ್ಯಾನಯೋಗವು ಬಂದಿದೆ. ಎರಡನೆಯ ಆರು ಅಧ್ಯಾಯಗಳಲ್ಲಿ ಪರ ಮಾತ್ಮ ವಿಷಯಕ ಜ್ಞಾನವಿಜ್ಞಾನಾದಿಗಳೇ ಮುಖ್ಯ ವಿಷಯಗಳು. ಈ ಆರು ಅಧ್ಯಾಯಗಳಲ್ಲಿ ಜ್ಞಾನಸಾಧನಗಳು ವಿಶೇಷವಾಗಿ ಬಂದಿರುವು ದಿಲ್ಲ. ಪರಮಾತ್ಮನ ಮಾಹಾತ್ಮ್ಯ, ಸೃಷ್ಟಿ-ಸ್ಥಿತಿ-ಸಂಹಾರಾದಿಗಳು, ಪರ ಮಾತ್ಮನ ವಿಭೂತಿಗಳು, ವಿಶ್ವರೂಪದರ್ಶನ ಇವೇ ಮುಂತಾದ ಆತನ ಹೆಚ್ಚಳವನ್ನು ಹೊರಗೆಡಹುವ ಸಂಗತಿಗಳು ಬಂದಿರುವವು. ೧೨ ನೆಯ ಅಧ್ಯಾಯದಲ್ಲಿ ಮಾತ್ರ, ಯಾವತ್ತು ಸಾಧನಗಳಲ್ಲಿ, ಭಗವಂತನ ಉಪಾ ಸನೆಯೇ ಹೆಚ್ಚಿನದೆಂದು ನಿರ್ಣಯಿಸಿದೆ. ಇನ್ನು, ಕೊನೆಯ ಆರು ಅಧ್ಯಾ ಯಗಳಲ್ಲಿ, ಹಿಂದಿನ ಅಧ್ಯಾಯಗಳ ಪ್ರಪಂಚನವು ಎಂದರೆ ವಿಸ್ತಾರವೇ ಇರುವುದಲ್ಲದೆ ಹೊಸ ವಿಷಯಗಳೇನೂ ಬಂದಿಲ್ಲ. ೧೩ನೆಯ ಅಧ್ಯಾ ಯವು ತತ್ವಜ್ಞಾನವಿಷಯಕ ಅಧ್ಯಾಯವು. ಅದರಲ್ಲಿ, ಕ್ಷೇತ್ರ, ಕ್ಷೇತ್ರಜ್ಞ, ಪ್ರಕೃತಿ, ಪುರುಷ ಮುಂತಾದ ವಿಷಯಗಳು ಬಂದಿವೆ. ಮತ್ತು ೧೪ ರಿಂದ ೧೮ ಅಧ್ಯಾಯಗಳಲ್ಲಿ, ಹಿಂದೆ ಹೇಳಿದ ಜ್ಞಾನಸಾಧನ ಗಳ ವಿವರಗಳು ಬಂದಿವೆ. ೧೪ ನೆಯ ಅಧ್ಯಾಯದಲ್ಲಿ ಸತ್ವರಜಸ್ತಮ ಗುಣಗಳ ವಿವೇಚನೆ,೧೫ರಲ್ಲಿ ಸಂಸಾರವೃಕ್ಷದ ವರ್ಣನೆ,೧೬ ರಲ್ಲಿ ದೈವೀ ಮತ್ತು ಆಸುರೀ ಸಂಪತ್ತಿನ ಲಕ್ಷಣಗಳು, ೧೭ ರಲ್ಲಿ ಶ್ರದ್ಧಾತ್ರಯ ವಿಭಾಗ, ಮತ್ತು ಆಹಾರ, ಯಜ್ಞ, ತಪ, ದಾನ ಮುಂತಾದವುಗಳಲ್ಲಿ ಸಾತ್ವಿಕ ರಾಜಸತಾಮಸಗಳೆಂಬ ಭೇದಗಳು, ೧೮ ನೆಯ ಅಧ್ಯಾಯದಲ್ಲಿ, ಹಿಂದೆ ಹೇಳಿದ ಯಾವತ್ತು ಜ್ಞಾನಸಾಧನಗಳ ಉಪಸಂಹಾರವು–ಹೀಗೆ ವಿಷಯಗಳು ಬಂದಿವೆ. ಇದು ಗೀತೆಯ ಸ್ಥೂಲವಿಭಾಗವು.

ಮೇಲ್ಕಾಣಿಸಿದ ಸಂಕ್ಷೇಪ ವಿಭಾಗದ ಮೇಲಿಂದ, ವಾಚಕರ ಲಕ್ಷ್ಯವನ್ನು, ಗೀತಾಸಂದೇಶಕ್ಕೆ ಉಪಯುಕ್ತವಾಗಿರುವ ಗೀತಾಭಾಗದ

ಕಡೆಗೆ ವೇಧಿಸುತ್ತೇವೆ. ಗೀತೆಯು ಕಿರಿಬೆರಳಿಗಿಂತ ಕಿರಿದಾದ ಆಕಾರ ವುಳ್ಳ ಗ್ರಂಥವಷ್ಟೆ. ಆದರೆ, ಗೀತಾಸಂದೇಶವನ್ನು ತಿಳಿದುಕೊಳ್ಳುವ ಮಟ್ಟಿಗೆ, ಈ ಗ್ರಂಥವನ್ನು ಇದಕ್ಕಿಂತ ಕಿರಿದಾಗಿ ಮಾಡಬಹುದು. ಏಕೆಂದರೆ, ಗೀತೆಯ ೭೦೦–೭೦೧ ಶ್ಲೋಕಗಳಲ್ಲಿ ಧೃತರಾಷ್ಟ್ರ, ಸಂಜಯ, ಅರ್ಜುನಾದಿಗಳ ಒಟ್ಟು ೧೨೭ ಶ್ಲೋಕಗಳನ್ನು ನಾವು ಸದ್ಯಕ್ಕೆ ಬಿಟ್ಟು ಕೊಡಬಹುದು. ಅವುಗಳಲ್ಲಿ ಶ್ರೀಕೃಷ್ಣನ ಉಪದೇಶವಿಲ್ಲ. ಶ್ರೀಕೃಷ್ಣನ ಶ್ಲೋಕಗಳು ೫೭೪ ಮಾತ್ರವೇ ಇರುತ್ತವೆ. ಇವುಗಳಲ್ಲಿಯೂ ನಮಗೆ ಈಗ ಅನಾವಶ್ಯಕವಾದ ಅನೇಕ ಶ್ಲೋಕಗಳಿರುತ್ತವೆ. ಉದಾ–ನಾವು ಈ ಗ್ರಂಥದ ೧ ನೆಯ ಪ್ರಕರಣದಲ್ಲಿ ಕೊಟ್ಟಿರುವ ಸುಮಾರು ೬೫–೭೦ ಶ್ಲೋಕಗಳು ಕೇವಲ ಗೀತೆಯ ಗೌರವವನ್ನು ಹೇಳುವ ಶ್ಲೋಕಗಳು. ಅವೂ ಸಂದೇಶಕ್ಕೆ ಸಂಬಂಧಿಸಿದವುಗಳಲ್ಲ.ಆದಕಾರಣ, ಗೀತೆಯ ಸಂದೇಶ ವನ್ನು ತೆಗೆಯುವ ದೃಷ್ಟಿಯಿಂದ, ಆ ಶ್ಲೋಕಗಳೇನೂ ಮಹತ್ವದ ಶ್ಲೋಕಗಳಲ್ಲ. ಅದೇ ಮೇರೆಗೆ, ಗೀತೆಯ ನಡುವಿನ ಆರು ಅಧ್ಯಾಯ ಗಳೊಳಗಿನ ಶ್ಲೋಕಗಳ ಸಾರವೆಲ್ಲವನ್ನೂ ನಾವು ಈ ಗೀತಾಸಂದೇಶದ 'ಸರ್ವವೂ ಭಗವದಧೀನವು' ಎಂಬುದೊಂದೇ ಪ್ರಕರಣದಲ್ಲಿ ಕೊಟ್ಟು ಮುಗಿಸಿರುವೆವು. ಏಕೆಂದರೆ, ಅವುಗಳಲ್ಲಿ ಪರಮಾತ್ಮನ ಜ್ಞಾನವಿಜ್ಞಾನ ಗಳು ಬಂದಿದ್ದು, ಸರ್ವವೂ ಭಗವದಧೀನವಿರುತ್ತದೆಂಬುದನ್ನು ತೋರಿಸಿ ಪರಮಾತ್ಮನಲ್ಲಿ ಭಕ್ತಿವಿಶ್ವಾಸಗಳನ್ನು ಹುಟ್ಟಿಸುವುದೇ ಅವುಗಳ ಮುಖ್ಯ ಉದ್ದೇಶವಿರುತ್ತದೆ. ಕೊನೆಯ ಆರು ಅಧ್ಯಾಯಗಳೂ ಗೀತಾಸಂದೇಶದ ದೃಷ್ಟಿಯಿಂದ ಅಷ್ಟೊಂದು ಮಹತ್ವದವುಗಳಲ್ಲ; ಏಕೆಂದರೆ, ಅವು ಗಳಲ್ಲಿ ವಿವರಗಳೇ ಹೆಚ್ಚಾಗಿ ಬಂದಿವೆ, ಮತ್ತು ವಿವರಗಳನ್ನು ನಾವು ಈ ಸಂದೇಶದಲ್ಲಿ ಕೊಡಲಿಚ್ಛಿಸುವುದಿಲ್ಲ. ಗೀತಾಸಂದೇಶವು ಗೀತೆಯ ಮುಖ್ಯ ಮಾತು ಯಾವುದೆಂಬುದೊಂದೇ ವಿಷಯವನ್ನು ವಿಸ್ತರಿಸುವ ಪುಸ್ತಕವು. ಪ್ರತಿಯೊಂದು ಅಧ್ಯಾಯದಲ್ಲಿ ಪ್ರಸ್ತಾವನಾರೂಪವಾದ, ಮತ್ತು ಬರೀದೃಷ್ಟಾಂತಗಳನ್ನು ಕೊಡುವ ಅಥವಾ ಫಲಗಳನ್ನು ಹೇಳುವ ಇವೇ–ಮುಂತಾದ ಆನುಷಂಗಿಕ ವಿಷಯಗಳನ್ನು ಹೇಳುವ ಶ್ಲೋಕ ಗಳನ್ನೂ ನಾವು ಬಿಟ್ಟುಕೊಡಬಹುದು. ಹೀಗೆ ಇವೆಲ್ಲ ಶ್ಲೋಕ

ಗಳನ್ನು ಬಿಟ್ಟುಕೊಟ್ಟರೆ, ಪ್ರತಿಯೊಂದು ಅಧ್ಯಾಯದಲ್ಲಿ ಕೆಲವು ಮುಖ್ಯ ಶ್ಲೋಕಗಳು ಉಳಿಯುವುವು. ಅವೆಲ್ಲ ಕೂಡಿದರೆ ಸುಮಾರು ೧೦೦–೧೫೦ ಶ್ಲೋಕಗಳು ಆಗುವುವು. ಗೀತಾಸಂದೇಶವೆಂದರೆ ಈ ೧೦೦–೧೫೦ ಶ್ಲೋಕಗಳ ಸಾರವು. ಅರ್ಜುನನ ಮನಸ್ಸಿನಲ್ಲಿ ಆಗಾಗ ಅನೇಕ ಸಂದೇಹಗಳು ಹುಟ್ಟಿರುವುವು. ಆ ಸಂದೇಹಗಳ ನಿವಾರಣೆಯನ್ನು ಶ್ರೀಕೃಷ್ಣನು ಯಾವ ತೆರನಾಗಿ ಮಾಡಿರುವನೆಂಬುದನ್ನು ನಾವು ಈಗ ಹೇಳುವ ಗೋಜಿಗೆ ಹೋಗುವುದಿಲ್ಲ.

ಮತ್ತೂ ಒಂದು ರೀತಿಯಿಂದ, ಗೀತೆಯನ್ನು ಕಿರಿದಾಗಿ ಮಾಡಬಹುದು. ಹೇಗೆಂದರೆ, ಗೀತೆಯಲ್ಲಿ ಶ್ರೀಕೃಷ್ಣನು ಮುಕ್ತಿಗೆ ಮುಟ್ಟುವುದಕ್ಕೆ ಅವಶ್ಯವಾಗಿರುವ ಅಪರೋಕ್ಷಜ್ಞಾನವನ್ನು ಸಂಪಾದಿಸುವುದಕ್ಕೆ ಅನೇಕ ತರದ ಸಾಧನಗಳನ್ನು ಹೇಳಿರುವನು. ಉದಾ–ಶ್ರವಣ ಮನನಾದಿಗಳನ್ನು ಹೇಳಿರುವನು. ಸ್ಥಿತಪ್ರಜ್ಞನು, ಗುಣಾತೀತನು, ಭಕ್ತನು ಇವೇ ಮುಂತಾದವರು ಯಾವ ಯಾವ ಗುಣಗಳುಳ್ಳವರಾಗಿರಬೇಕೆಂಬುದನ್ನು ವರ್ಣಿಸಿರುವನು. ಅವೆಲ್ಲವೂ ಬಹುಶಃ ಒಂದೇ ತರಹದವು, ಎಂದರೆ, ಸ್ಥಿತಪ್ರಜ್ಞನಲ್ಲಿ ಇರಬೇಕಾದ ಸುಖದುಃಖಸಮತ್ವ, ರಾಗದ್ವೇಷವರ್ಜಿತತ್ವ, ದ್ವಂದ್ವಮೋಹರಾಹಿತ್ಯ, ಇವೇ ಮುಂತಾದವುಗಳೇ ಗುಣಾತೀತನಾದವನಲ್ಲಿಯೂ ಇರತಕ್ಕ ಗುಣಗಳು. ಅದೇಮೇರೆಗೆ ೧೩ ನೆಯ ಅಧ್ಯಾಯದಲ್ಲಿ ಹೇಳಿರುವ ದಂಭ ಇಲ್ಲದಿರುವುದು, ಅಹಿಂಸೆ, ಸಹನಶೀಲತೆ ಇವೇ ಮುಂತಾದ ಜ್ಞಾನಸಾಧನಗಳೇ ಮುಂದೆ ೧೪ನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿವೆ. ಸಾರಾಂಶ, ಗೀತೆಯಲ್ಲಿ ಅಪರೋಕ್ಷಜ್ಞಾನವನ್ನು ಹುಟ್ಟಿಸುವುದಕ್ಕೆ ಮನುಷ್ಯನಲ್ಲಿರಬೇಕಾದ ಅನೇಕ ಧರ್ಮಗಳ ವಿವರಗಳು ಅಲ್ಲಲ್ಲಿ ಬಂದಿವೆ. ಆ ವಿವರಗಳನ್ನು ಹೇಳುವುದು ಗೀತಾಸಂದೇಶದ ಉದ್ದೇಶವಲ್ಲ. ಗೀತಾಸಂದೇಶದಲ್ಲಿ, ನಾವು ಈ ವಿವರಗಳ ವಿಸ್ತಾರದಲ್ಲಿ ಸೇರುವುದಿಲ್ಲ. ಇವೆಲ್ಲ ಧರ್ಮಗಳು ಯಾವ ಮೂಲತತ್ವದ ಮೇಲೆ ರಚಿತವಾಗಿರುತ್ತವೆಂಬುದನ್ನು ಎಂದರೆ ಮನುಷ್ಯನ ಎಲ್ಲಕ್ಕೂ ಹೆಚ್ಚಿನ ಧರ್ಮವಾವುದೆಂಬುದನ್ನು ಮಾತ್ರವೇ ಹೇಳುತ್ತೇವೆ. ಆ ಪರಮಧರ್ಮದಲ್ಲಿ ಮಿಕ್ಕ ಧರ್ಮಗಳೆಲ್ಲವೂ ಅಡಕವಾಗುತ್ತವೆ. ಉದಾ–

ಮನುಷ್ಯನು ಕಾಮ ಬಿಡಬೇಕು, ಕ್ರೋಧ ಬಿಡಬೇಕು, ಅಹಂಕಾರ ಬಿಡಬೇಕು, ಫಲೇಚ್ಛೆ ಬಿಡಬೇಕು–ಹೀಗೆ ನಾನಾಬಗೆಯಾಗಿ ಹೇಳಿದೆ. ಇವೆಲ್ಲವನ್ನೂ ಮನುಷ್ಯನು ವೈರಾಗ್ಯವನ್ನು ತಾಳಬೇಕೆಂಬ ಒಂದೇ ಧರ್ಮದಲ್ಲಿ ಸಮಾವೇಶ ಮಾಡಬಹುದಷ್ಟೇ. ಹಾಗೆಯೇ ಮನುಷ್ಯನು ಸುಖದುಃಖಗಳನ್ನು ಸಮನಾಗಿ ಗಣಿಸಬೇಕು, ಹೊಗಳಿಕೆ ತೆಗಳಿಕೆಗಳ ಕಡೆಗೆ ಲಕ್ಷ್ಯ ಕೊಡಬಾರದು, ದೇವರು ಕೊಟ್ಟದ್ದರಲ್ಲಿ ಸಂತುಷ್ಟನಾಗಿರಬೇಕು–ಇವೇ ಮುಂತಾದ ಅನೇಕ ಗುಣಗಳನ್ನು ಕೂಡ, ಮನುಷ್ಯನು ವೈರಾಗ್ಯವುಳ್ಳವನಾಗಬೇಕೆಂಬ ಒಂದೇ ಗುಣದಲ್ಲಿ ಸೇರಿಸಬಹುದು. ಮನುಷ್ಯನು ಸಂನ್ಯಾಸವನ್ನು ಅವಲಂಬಿಸಬೇಕು, ಅಥವಾ ತ್ಯಾಗಬುದ್ಧಿಯುಳ್ಳವನಾಗಬೇಕು ಎಂದು ಹೇಳಿದರೆ ತೀರಿತು. ಇವೆಲ್ಲ ಗುಣಗಳು ಆತನಲ್ಲಿ ಇರಬೇಕೆಂಬುದನ್ನು ವಿವರಿಸಿ ಹೇಳುವ ಕಾರಣವಿಲ್ಲ. ಅದೇ ಮೇರೆಗೆ, ಪರಮಾತ್ಮನಲ್ಲಿ ಮನಸ್ಸಿಡಬೇಕು, ಅನ್ಯದೇವತೆಗಳನ್ನು ಭಜಿಸಬಾರದು, ಸ್ವರ್ಗವನ್ನು ಅಪೇಕ್ಷಿಸದೆ, ಮುಕ್ತಿಯೊಂದನ್ನೇ ಅಪೇಕ್ಷಿಸಬೇಕು, ಯೋಗಕ್ಷೇಮಗಳ ಚಿಂತೆಯನ್ನು ಬಿಟ್ಟುಕೊಡಬೇಕು, ಪ್ರತಿಯೊಂದು ಕೃತ್ಯವನ್ನು ಈಶ್ವರನಿಗೆ ಸಮರ್ಪಿಸಬೇಕು–ಇವೇ ಮುಂತಾದ ವಿವರಗಳನ್ನೆಲ್ಲ, ಪರಮಾತ್ಮನಲ್ಲಿ ಭಕ್ತಿಮಾಡಬೇಕು – ಎಂಬುದೊಂದೇ ವಾಕ್ಯದಲ್ಲಿ ಹೇಳಬಹುದು. ಹಾಗೆಯೇ, ತನ್ನ ಕರ್ತವ್ಯ ಮಾಡಬೇಕು, ನಿಯತ ಕರ್ಮಮಾಡಬೇಕು, ತನ್ನ ಸಹಜ ಕರ್ಮಮಾಡಬೇಕು, ಸ್ವಧರ್ಮವನ್ನವಲಂಬಿಸಬೇಕು, ವರ್ಣಾಶ್ರಮೋಚಿತವಾದ ಕರ್ಮಗಳನ್ನು ಬಿಡಬಾರದು – ಇವೇ ಮುಂತಾದವುಗಳನ್ನು ಮನುಷ್ಯನು ಸ್ವವಿಹಿತವೃತ್ತಿಯನ್ನವಲಂಬಿಸಬೇಕು – ಎಂಬುದೊಂದೇ ಸಿದ್ಧಾಂತದಲ್ಲಿ ಸೇರಿಸಬಹುದು. ಒಟ್ಟಿಗೆ ಹೇಳುವುದೇನೆಂದರೆ, ಗೀತೆಯಲ್ಲಿ ಅನೇಕ ವಿಶೇಷ ಧರ್ಮಗಳ ವರ್ಣನೆ ಬಂದಿದ್ದು, ಅವೆಲ್ಲವುಗಳನ್ನು ನಾವು ಇಲ್ಲಿ ಕೊಡದೆ, ಅವೆಲ್ಲ ಧರ್ಮಗಳಿಗೆ ಮೂಲಭೂತವಾದ ಪರಮಧರ್ಮವಾವುದೆಂಬುದೊಂದನ್ನೇ ವಿವರಿಸುತ್ತೇವೆ.

ಈ ಬಗೆಯಾಗಿ, ಗೀತೆಯ ಸಂದೇಶದ ಕ್ಷೇತ್ರವನ್ನು ನಾವು ಅನೇಕ ಬಗೆಯಾಗಿ ಸಂಕುಚಿತವಾಗಿ ಮಾಡಿರುವೆವು. ಹೀಗೆ ಮಾಡುವದರ

ಉದ್ದೇಶವು ವಾಚಕರ ಲಕ್ಷವನ್ನು ಗೀತೆಯ ಮುಖ್ಯ ಮಾತಿನ ಕಡೆಗೆ ಕೇಂದ್ರೀಕರಿಸುವುದೇ ಇರುತ್ತದೆಂಬುದನ್ನು ಮರೆಯಬಾರದು.

ಕೊನೆಗೆ, ಗೀತೆಯ ರಚನೆಯ ವಿಷಯದಲ್ಲಿ ನಾವು ನೆನಪಿನಲ್ಲಿಡ ತಕ್ಕ ಮತ್ತೊಂದು ಮಾತೇನೆಂದರೆ ಗೀತೆಯ ಕೆಲವು ಪಾರಿಭಾಷಿಕ ಶಬ್ದ ಗಳ ಅರ್ಥವನ್ನು ಮುಂಚೆ ಮನದಟ್ಟಾಗಿ ಮಾಡಿಕೊಳ್ಳಬೇಕೆಂಬುದು. ಏಕೆಂದರೆ, ಆ ಶಬ್ದಗಳ ಈಗಿನ ರೂಢವಾದ ಅರ್ಥಕ್ಕೂ ಆಗಿನ ಕಾಲದ ರೂಢವಾದ ಅರ್ಥಕ್ಕೂ ಬಹಳ ಅಭ್ಯಂತರವಿದೆ. ಆದಕಾರಣ, ಆಯಾ ಶಬ್ದಗಳ ಆಗಿನ ರೂಢವಾದ ಅರ್ಥವು ಮನಸ್ಸಿನಲ್ಲಿ ಬಾರದಿದ್ದರೆ, ನಿಷ್ಕಾ ರಣವಾಗಿ ಗೊಂದಲವಾಗಬಹುದು. ಉದಾ—ಸಂನ್ಯಾಸ, ಯೋಗ, ಜ್ಞಾನ, ಪ್ರಕೃತಿ, ಸಾಂಖ್ಯ, ಯಜ್ಞ ಮುಂತಾದ ಶಬ್ದಗಳ ಸಾಮಾನ್ಯ ಅರ್ಥಕ್ಕೂ ಗೀತೆಯ ಅರ್ಥಕ್ಕೂ ಭೇದವಿದೆ. ಸಂನ್ಯಾಸವೆಂದೊಡನೆ ಸಂನ್ಯಾಸಾಶ್ರಮವು ನಮ್ಮ ಕಣ್ಣಿನ ಮುಂದೆ ಬಂದು ನಿಲ್ಲುತ್ತದೆ. ಆದರೆ, ಗೀತೆಯಲ್ಲಿ ಸಂನ್ಯಾಸ ಶಬ್ದಕ್ಕೆ ಆ ಅರ್ಥವಿಲ್ಲ. ಸಂನ್ಯಾಸವೆಂದರೆ ಬಿಡು ವುದು, ಸಾಮಾನ್ಯತಃ ಕಾಮಕ್ರೋಧಾದಿಗಳನ್ನು ಬಿಡುವುದು, ಅಹಂ ಕಾರಾದಿಗಳನ್ನು ಬಿಡುವುದು, ಇಷ್ಟೇ ಇರುತ್ತದೆ. ಹಾಗೆಯೇ ಯೋಗ ವೆಂದೊಡನೆಯೇ ಹಠಯೋಗಾದಿಗಳು ಮನಸ್ಸಿನಲ್ಲಿ ಬರುತ್ತವೆ. ಆದರೆ, ಅದಕ್ಕೂ ಗೀತೆಯ ಯೋಗಕ್ಕೂ ಏನೂ ಸಂಬಂಧವಿಲ್ಲ. ಗೀತೆಯಲ್ಲಿ ಯೋಗವೆಂದರೆ ಉಪಾಯ, ಸಾಧನ. ಅರ್ಥಾತ್ ಜ್ಞಾನದ ಸಾಧನ ವೆಂದು ಅರ್ಥ. ಅದೇ ಮೇರೆಗೆ ಜ್ಞಾನ ಶಬ್ದದ ಅರ್ಥ. ಜ್ಞಾನವೆಂದೊ ಡನೆ ಈಗಿನ ಜನರ ಲಕ್ಷವು ಬೌದ್ಧಿಕಜ್ಞಾನದ ಕಡೆಗೆ ಹೋಗುತ್ತದೆ. ಇಂಥದೊಂದು ವಿಷಯದ ಜ್ಞಾನವಾಗಿದೆಯೆಂದು ಹೇಳಿದರೆ, ಆ ವಿಷಯದ ಸಂಬಂಧವಾಗಿ ತಿಳಿಯತಕ್ಕದ್ದೆಲ್ಲವೂ ತಿಳಿದಿದೆಯೆಂದು ಈಗಿನ ಅರ್ಥ. ಆದರೆ, ಗೀತೆಯಲ್ಲಿ ಇಂಥ ಬೌದ್ಧಿಕ ಜ್ಞಾನವು ಅನೇಕ ಕಡೆಗೆ ಹೇಳಲ್ಪಟ್ಟಿದ್ದರೂ ಗೀತೆಯಲ್ಲಿ ಜ್ಞಾನ ಶಬ್ದಕ್ಕೆ ಇದಕ್ಕಿಂತ ಹೆಚ್ಚಿಗೆ ವ್ಯಾಪಕವಾದ ಅರ್ಥವಿದೆ. ಅನುಭವಜನ್ಯಜ್ಞಾನ, ಪ್ರತ್ಯಕ್ಷಜ್ಞಾನ, ಅಥವಾ ಪರಮಾತ್ಮನ ಅಪರೋಕ್ಷಜ್ಞಾನಕ್ಕೆ ಗೀತೆಯು ವಿಶೇಷ ಬೆಲೆ ಕೊಡುತ್ತವೆ. ಅಲ್ಲದೆ, ಐಹಿಕ ವಿಷಯಗಳ ಜ್ಞಾನಕ್ಕೆ ಜ್ಞಾನವೆಂದೆನ್ನದೆ,

ಪರಮಾತ್ಮವಿಷಯಕ ಜ್ಞಾನಕ್ಕೇ ಅದು ಜ್ಞಾನವೆಂದೆನ್ನುತ್ತದೆ. ಆದುದರಿಂದ, ಯಾವನೊಬ್ಬನು ಭೌತಿಕ ಶಾಸ್ತ್ರಗಳಲ್ಲಿ ಘನಪಂಡಿತನಾಗಿದ್ದರೂ ಆತನಿಗೆ ಪರಮಾತ್ಮನಲ್ಲಿ ವಿಶ್ವಾಸವಿಲ್ಲದಿದ್ದರೆ,ಅಥವಾ ಪರಮಾತ್ಮವಿಷಯಕ ಜ್ಞಾನವಿರದಿದ್ದರೆ, ಅಂಥವನಿಗೆ ಗೀತೆಯು ಜ್ಞಾನಿಯೆಂದು ಕರೆಯುವುದಿಲ್ಲ.

ಇದೇ ಮೇರೆಗೆ ಯಜ್ಞ, ಪ್ರಕೃತಿ, ಕರ್ಮ ಮುಂತಾದ ಅನೇಕ ಶಬ್ದಗಳ ವಿಶಿಷ್ಟ ಅರ್ಥವನ್ನು ನಾವು ಕಲಿಯಬೇಕು.

---

೫ ನೆಯ ಪ್ರಕರಣ

## ಗೀತೆಯ ತಳಹದಿಯ ತತ್ವಗಳು

ಪ್ರತಿಯೊಂದು ಶಾಸ್ತ್ರದ ಬುಡಕ್ಕೆ ಕೆಲವು ಸ್ವತಃಸಿದ್ಧವಾದ ಮತ್ತು ಕೆಲವು ಗೃಹಿತವಾದ ತತ್ವಗಳಿರುತ್ತವೆ. ಅವುಗಳ ಆಧಾರದ ಮೇಲೆ ಆ ಶಾಸ್ತ್ರದ ಮಿಕ್ಕ ಪ್ರಮೇಯಗಳೆಲ್ಲವೂ ನಿಂತಿರುತ್ತವೆ. ಆ ಮೂಲಭೂತ ತತ್ವಗಳನ್ನು ನಾವು ಮುಂಚೆ ಕೇವಲ ವಿಶ್ವಾಸದಿಂದಲೇ ಸ್ವೀಕರಿಸಬೇಕಾಗುತ್ತದಲ್ಲದೆ ಅವುಗಳ ವಿಷಯವಾಗಿ 'ಏಕೆ' 'ಏನು' ಎಂದು ಪ್ರಶ್ನೆ ಮಾಡತಕ್ಕದ್ದಿರುವುದಿಲ್ಲ; ಏಕೆಂದರೆ, ಹೊಸಬರಿಗೆ ಆ ತತ್ವಗಳನ್ನು ತಿಳಿಸಿ ಹೇಳುವುದು ಎಂದಿಗೂ ಶಕ್ಯವಿರುವುದಿಲ್ಲ. ಭೂಮಿತಿ ಶಾಸ್ತ್ರವನ್ನು ಕಲಿಯುವ ವಿದ್ಯಾರ್ಥಿಗಳಿಗೆ ಈ ಸಂಗತಿ ಮೊದಲಿಗೆ ಚೆನ್ನಾಗಿಯೇ ಗೊತ್ತಾಗುತ್ತದೆ. ಅದರ ಪ್ರಾರಂಭಕ್ಕೆ ಕೊಟ್ಟಿರುವ ವ್ಯಾಖ್ಯೆಗಳು (Definitions) ಸ್ವತಃಸಿದ್ಧತತ್ವಗಳು (Axoms) ಮತ್ತು ಗೃಹಿತ ತತ್ವಗಳು (Postulates) ಇವುಗಳನ್ನು ವಿದ್ಯಾರ್ಥಿಗಳ ಶ್ರದ್ಧೆಯಿಂದಲೇ ನಂಬಬೇಕಲ್ಲದೆ, ಆ ಬಗ್ಗೆ ತರ್ಕವಿತರ್ಕವನ್ನು ಪ್ರಾರಂಭಿಸಿದರೆ, ಅವರಿಗೆ ಅವುಗಳನ್ನು ಸಿದ್ಧಮಾಡಿ ತೋರಿಸುವ ಶಕ್ತಿಯು ಯಾವ ಪಂಡಿತನಲ್ಲಿಯೂ ಇರುವುದಿಲ್ಲ. ಉದಾ–ಅಗಲವಿಲ್ಲದೆ ಕೇವಲ ಉದ್ದವೊಂದೇ ಇರುವುದೇ ಗೆರೆಯು ಎಂದು ಹೇಳಿದೆ. ಅಲ್ಪ

ಸ್ವಲ್ಪವಾದರೂ ಅಗಲವಿಲ್ಲದೆ ಯಾವುದಾದರೂ ಒಂದು ಗೆರೆಯಿರುವುದು ಶಕ್ಯವಿದೆಯೆ ? ಇಲ್ಲ. ಆದರೂ, ಮನಸಿನಲ್ಲಿ, ಆ ತರಹದ ಒಂದು ಗೆರೆಯನ್ನು ಕಲ್ಪಿಸಲು ಉಪಾಧ್ಯಾಯರು ಹೇಳುತ್ತಾರೆ. ಮತ್ತು ಹಾಗೆ ನಂಬುವುದರಿಂದ, ಮುಂದಿನ ಸಿದ್ಧಾಂತಗಳ ಸತ್ಯತೆಗೆ ಬಾಧೆಯೇನೂ ಬರುವುದಿಲ್ಲ. ಇದರಂತೆಯೇ ಗಣಿತ ಶಾಸ್ತ್ರ, ಜ್ಯೋತಿಷಶಾಸ್ತ್ರ, ಪದಾರ್ಥವಿಜ್ಞಾನಶಾಸ್ತ್ರ, ಜೀವನಶಾಸ್ತ್ರ ಇವೇ ಮುಂತಾದ ಶಾಸ್ತ್ರಗಳ ವಿಚಾರ. ಅವುಗಳ ಬುಡಕ್ಕೂ ಕೆಲವು ಈ ಬಗೆಯ ತತ್ವಗಳಿರುತ್ತವೆ. ಅವುಗಳನ್ನು ಮೊದಲು ನಂಬಿಗೆಯಿಂದಲೇ ಗ್ರಹಣ ಮಾಡಬೇಕಾಗುತ್ತದೆ. ಹಾಗೆಯೇ ವೇದಾಂತ ಶಾಸ್ತ್ರದ ಸ್ಥಿತಿಯು. ವೇದಾಂತಶಾಸ್ತ್ರವಂತೂ ಇವೆಲ್ಲ ಶಾಸ್ತ್ರಗಳಿಗಿಂತಲೂ ಗೂಢವಾದ ಮತ್ತು ಗಹನವಾದ ಶಾಸ್ತ್ರವು. ಅಂದಬಳಿಕ, ಇದರ ಬುಡಕ್ಕಿರುವ ಮೂಲಭೂತ ತತ್ವಗಳನ್ನು ಮುಂಚೆ ಶ್ರದ್ಧೆಯಿಂದಲೆ ನಂಬ ಸಾಗದೆ ಗತ್ಯಂತರವಿಲ್ಲ. ಹಾಗೆ ಮಾಡುವವರಿಗೆ ಅಂಧಶ್ರದ್ಧೆಯುಳ್ಳವರೆಂದು ಮೂಗು ಮುರಿಯುವ ಕಾರಣವಿಲ್ಲ. ಆದ ಕಾರಣ, ಈ ಗೀತಾಶಾಸ್ತ್ರದ ತಳಹದಿಯ ತತ್ವಗಳು ಯಾವುವೆಂಬುದನ್ನು ನಾವು ಹೇಳುತ್ತೇವೆ. ವೇದಾಂತ ಶಾಸ್ತ್ರವನ್ನು ಭೂಮಿತಿ ಶಾಸ್ತ್ರದ ಪದ್ಧತಿಗನುಸಾರವಾಗಿ ವ್ಯಾಖ್ಯೆ, ಸ್ವಯಂಸಿದ್ಧ ತತ್ವಗಳು, ಗೃಹೀತತತ್ವಗಳು ಮುಂತಾದವುಗಳನ್ನು ಕೊಟ್ಟು ಸಿದ್ಧಪಡಿಸುವುದು ಶಕ್ಯವಿದೆಂದು ನಮಗೆ ತೋರುತ್ತದೆ. ಆದರೆ, ಇಲ್ಲಿ, ನಾವು ಅಷ್ಟು ಆಳನೀರಿನಲ್ಲಿ ಇಳಿಯಲು ಇಚ್ಛಿಸುವುದಿಲ್ಲ. ಗೀತೆಯ ಸಂದೇಶವನ್ನು ತಿಳಿದುಕೊಳ್ಳುವ ಮಟ್ಟಿಗೆ ಬೇಕಾಗುವ ತತ್ವಗಳನ್ನು ಸ್ಥೂಲವಾಗಿ ಹೇಳುವೆವು.

ಪರಮಾತ್ಮನ ಲೀಲೆಯು ಅತ್ಯಗಾಧವಾದುದು, ಗೂಢವಾದುದು, ಅಚಿಂತ್ಯವಾದುದು. ಆತನು ಯಾರು, ಆತನ ನಿಜಸ್ವರೂಪವೇನು, ಆತನು ಜಗತ್ತನ್ನು ಹೇಗೆ ನಿರ್ಮಾಣ ಮಾಡಿದನು, ಇವೇ ಮುಂತಾದ ವಿಷಯಗಳನ್ನು ಸಮಾಧಾನಕರವಾಗಿ ತಿಳಿಸಿ ಹೇಳುವ ಶಕ್ತಿಯು ಯಾವ ಮಾನವನಲ್ಲಿಯೂ ಇಲ್ಲ. ವೇದಾದಿಗಳ ಆಧಾರದಿಂದ ಅವನ್ನು ನಂಬಬೇಕು, ಅಥವಾ ಮತ್ತಾವುದೊಂದು ಕಾರಣಕ್ಕೋಸ್ಕರ ಅವನ್ನು ನಂಬಬೇಕು, ದೇವರು ಇದ್ದಾನೆಯೋ ಇಲ್ಲವೋ ಎಂಬುದನ್ನು ಸಿದ್ಧಮಾಡಿ ತೋರಿ

ಸುವ ಶಕ್ತಿಯು ಯಾವನಲ್ಲಿ ಇದೆ? ಅಂದ ಬಳಿಕ ನಾವು ಅದನ್ನು ಏಕೆ ನಂಬಬೇಕೆಂದು ಕೇಳಬಹುದು. ಆ ತತ್ವವನ್ನು ಗೃಹಿತವಾಗಿ ತೆಗೆದು ಕೊಂಡರೆ, ಜಗತ್ತಿನ ಅನೇಕ ಗೂಢಗಳು ಹೇಗೆ ಬಿಡುತ್ತವೆಯೋ ಹಾಗೆ ಬೇರೆ ರೀತಿಯಿಂದ ಬಿಡುವುದಿಲ್ಲವಾದುದರಿಂದ ಆ ಈಶತತ್ವವನ್ನು ನಂಬಬೇಕೆಂಬುದೊಂದೇ ಉತ್ತರವನ್ನು ನಾವು ಕೊಡಬಹುದಲ್ಲದೆ, ಅದಕ್ಕೆ ಬೇರೆ ಉತ್ತರವಿಲ್ಲ. ಕಪಟನಾಟಕಸೂತ್ರಧಾರನಾದ ಪರಮಾತ್ಮನು ಈ ಜಗತ್ತಿನ ನಾಟಕವನ್ನು ಪ್ರಾರಂಭ ಮಾಡುವಾಗ ಪ್ರಥಮತಃ ಪರದೆಯನ್ನೆತ್ತಿದೊಡನೆಯೆ ನಮ್ಮ ಕಣ್ಣಿಗೆ ಏನು ಬೀಳುತ್ತದೆಂಬುದನ್ನಷ್ಟೇ ನಾವು ಹೇಳಬಲ್ಲೆವು.ಅಲ್ಲದೆ,ಪರದೆಯ ಹಿಂದೆ ಆತನು ತನ್ನ ಬಣ್ಣದ ಗರಡೀ ಮನೆಯಲ್ಲಿ (Green-Room) ಏನೇನು ಸಿದ್ಧತೆಯನ್ನು ಮಾಡಿದನೆಂಬುದನ್ನು ನಾವು ಹೇಳಲಾರೆವು. ಪರದೆಯನ್ನೆತ್ತಿದೊಡನೆ ನಮ್ಮ ಕಣ್ಣಿಗೆ ಬೀಳುವ ನೋಟವೆಂದರೆ,—ಜಗತ್ತೆಂಬ ರಂಗಭೂಮಿಯ ಮೇಲೆ ವಿವಿಧ ಜೀವಗಳು ತಮ್ಮ ತಮ್ಮ ಪಾತ್ರಗಳನ್ನು ವಹಿಸಿ ಆಟವಾಡುತ್ತಿರುತ್ತವೆ. ಆ ಆಟಕ್ಕೆಲ್ಲ ನಿಯಾಮಕನಾದ ಸೂತ್ರಧಾರನು ಪರಮಾತ್ಮನು. ಆತನು ನಮ್ಮ ಕಣ್ಣಿಗೆ ಕಾಣುವುದಿಲ್ಲ. ಪರದೆಯ ಹಿಂದೆ ನಡೆದ ಎಲ್ಲ ಸಂಗತಿಗಳು ಅಚಿಂತ್ಯ ಶಕ್ತಿಯ ಸದರಿನಲ್ಲಿ ಬೀಳುತ್ತವೆ. ಆದಕಾರಣ ಆ ಅಚಿಂತ್ಯ ಶಕ್ತಿಯನ್ನು ಬಿಟ್ಟುಕೊಟ್ಟರೆ, ಈ ಕೆಳಗೆ ಕಾಣಿಸಿದ ತತ್ತ್ವಗಳು ಗೀತೆಯ ಮೂಲಭೂತತತ್ವಗಳೆಂದು ಸ್ಥೂಲಮಾನದಿಂದ ಇಟ್ಟುಕೊಳ್ಳಲು ಅಡ್ಡಿ ಇಲ್ಲ.

(೧) ದೇವರು ಇದ್ದಾನೆ.

(೨) ಗೀತೆಯ ಶ್ರೀಕೃಷ್ಣನೇ ಪರಮಾತ್ಮನು ಆತನೇ ಪರಬ್ರಹ್ಮನು.

(೩) ಪರಮಾತ್ಮನು ಜಗತ್ತಿನ ಯಾವತ್ತು ಪದಾರ್ಥಗಳನ್ನೂ ವಿವಿಧ ಜೀವರುಗಳನ್ನೂ ಹುಟ್ಟಿಸಿರುವನು.

(೪) ಆ ಜೀವರುಗಳೆಲ್ಲರೂ ಸಂಸಾರಸಾಗರದೊಳಗಿಂದ ಈಸಿ ಹೋಗಿಯೇ ಶಾಶ್ವತಸುಖವನ್ನು ಅಥವಾ ಮೋಕ್ಷವನ್ನು ಪಡೆಯಬೇಕೆಂದು ಆತನ ಸಂಕಲ್ಪ.

(೫) ಆ ಉದ್ದೇಶದಿಂದ, ಆತನು ಜೀವರುಗಳಿಗೆ ಸಾಧನ ಮಾಡು ವುದಕ್ಕೋಸ್ಕರ ಅನೇಕ ಜನ್ಮಗಳನ್ನು ಕೊಟ್ಟು ಅವರಿಂದ ಸಾಧನಗಳನ್ನು ಮಾಡಿಸುವನು.

ಸದ್ಯಕ್ಕೆ ನಾವು ಈ ಐದು ತತ್ವಗಳನ್ನು ಇಟ್ಟುಕೊಳ್ಳುವ. ಈ ಐದು ಮೂಲ ತತ್ವಗಳನ್ನು ವಾಚಕರು ಕೇವಲ ಶ್ರದ್ಧೆಯಿಂದಲೇ ನಂಬ ಬೇಕೆಂದು ನಾವು ಹೇಳುವವರು. ಅದಕ್ಕೆ ಬೇಕಾದರೆ, ಅಂಧಶ್ರದ್ಧೆ ಯೆಂದು ಕರೆಯಿರಿ, ಅಥವಾ ಕರೆಯದೆ ಇರಿರಿ. ಅಂಧಶ್ರದ್ಧೆಯೆಂಬ ಶಬ್ದಕ್ಕೆ ಅನೇಕರು ಬಲು ಬೆದರುತ್ತಾರೆ! ನಿಜವಾಗಿ ವಿಚಾರ ಮಾಡಿ ದರೆ, ನಾವು ಮೇಲೆ ಹೇಳಿದಂತೆ, ಪ್ರತಿಯೊಂದು ಶಾಸ್ತ್ರವೂ ಅಂಧ ಶ್ರದ್ಧೆಯಿಂದಲೇ ಪ್ರಾರಂಭವಾಗುತ್ತದೆ. ಮಿಕ್ಕಭೌತಿಕ ಶಾಸ್ತ್ರಗಳಲ್ಲಿ, ಮೂಲಭೂತ ತತ್ವಗಳನ್ನು ನಂಬುವವರನ್ನು ನಾವು ಹಳಿಯುವದಿಲ್ಲವೆಂದ ಬಳಿಕ, ಪರಮಶಾಸ್ತ್ರವಾದ ವೇದಾಂತದಲ್ಲಿ ಹಾಗೆ ಅವುಗಳನ್ನು ಶ್ರದ್ಧೆಯಿಂದ ನಂಬಿದರೆ ಹಳಿಯುವುದೇಕೆ? ಆದಕಾರಣ, ವಾಚಕರು ಅಂಧಶ್ರದ್ಧೆಯ ಆರೋಪಕ್ಕೆ ಹೆದರದೆ, ಈ ತತ್ವಗಳನ್ನು ಗ್ರಹಿಸಬೇಕು.

ಇನ್ನು, ಆ ಮೂಲಭೂತ ತತ್ವಗಳನ್ನು ತುಸು ವಿವರಿಸುವೆವು. ಅರ್ಥಾತ್, ಅವುಗಳ ಪೂರ್ಣಕಲ್ಪನೆಯನ್ನು ಮಾಡಿಕೊಡುವುದು ಶಕ್ಯವೇ ಇಲ್ಲ. ಆದರೂ, ಉಪಮೆ ಉದಾಹರಣೆಗಳ ದ್ವಾರದಿಂದ, ಅವು ಗಳ ಕಿಂಚಿತ್ ಕಲ್ಪನೆಯನ್ನು ಮಾಡಿಕೊಡಲು ಯತ್ನಿಸುತ್ತೇವೆ. (೧) ದೇವರು ಇದ್ದಾನೆ. ಇಡೀ ಗೀತಾಶಾಸ್ತ್ರದ ಕಟ್ಟಡವು ಈ ತತ್ವದ ಮೇಲೆ ನಿಂತಿದೆ. ದೇವರನ್ನು ನಂಬದಿದ್ದವನು ಗೀತೆಯನ್ನು ಓದುವ ಉಸಾಬರಿಗೇ ಹೋಗಬಾರದು. ಅಂಥವನಿಗೆ ಗೀತೆಯ ತತ್ವಗಳ ಪೂರ್ಣ ಮರ್ಮವು ಎಂದಿಗೂ ಚೆನ್ನಾಗಿ ಮನವರಿಕೆಯಾಗದು. ಈ ತಳಹದಿಯ ತತ್ವವನ್ನು ಕಡಿದುಬಿಟ್ಟರೆ ಇಡೀ ವೃಕ್ಷವೇ ಉರುಳಿ ಬೀಳುವುದು. ಗೀತೆಯ ೧೫ ನೆಯ ಅಧ್ಯಾಯದಲ್ಲಿ, ಸಂಸಾರವೃಕ್ಷದ ವಿಸ್ತಾರವಾದ ವರ್ಣನೆಯುಂಟು. ಅಲ್ಲಿ ಅದನ್ನು ಒಂದು ವೃಕ್ಷಕ್ಕೆ ಹೋಲಿಸಿದ್ದು ಯಥಾರ್ಥವಿದೆ. ಅಲ್ಲಿ ಹೇಳಿದಂತೆ, ಅದರ ವಾಸ್ತವಿಕ ಸ್ವರೂಪವು ತಿಳಿ ಯುವುದೇ ಇಲ್ಲ. (೧೫.೩), ಅದರ ಆದಿ ಅಂತಗಳು ಅಗಮ್ಯವಾದವುಗಳು.

ಕೇವಲ ಆ ಪರಮಾತ್ಮನಿಗೆ ಶರಣು ಹೋದವರು ಮಾತ್ರವೇ ಆ ಸಂಸಾರವನ್ನು ದಾಟಬಲ್ಲರು (೧೫.೪). ಆದಕಾರಣ, ದೇವರನ್ನು ನಂಬದವರನ್ನು ಗೀತೆಯು ಬಲವಾಗಿ ದೂಷಿಸಿದೆ. ಅಂಥವರು ಅತಿಶಯ ಬುದ್ಧಿವಂತರಿರಬಹುದು, ನಿಸ್ವಾರ್ಥಿಗಳಿರಬಹುದು, ಪರೋಪಕಾರಿಗಳಿರಬಹುದು, ದೇಶಭಕ್ತರಿರಬಹುದು. ಹೀಗೆ ಅವರಲ್ಲಿ ಎಷ್ಟು ಸದ್ಗುಣಗಳಿದ್ದರೂ ಅದು ವ್ಯರ್ಥ. ಅವರೆಲ್ಲರೂ ಆಸುರಿಸಂಪತ್ತಿಯುಳ್ಳವರೇ ಸರಿ. ಈ ತತ್ತ್ವವನ್ನು ಅನೇಕರು ಮರೆತುಬಿಡುತ್ತಾರೆ. ಅವರಿಗೆ ಗೀತೆಯೆಂದರೆ ಅದೊಂದು ನೀತಿಶಾಸ್ತ್ರದ ಗ್ರಂಥವೆಂದೆನಿಸುತ್ತದೆ. ಗೀತೆಯು ವಸ್ತುತಃ ನೀತಿಶಾಸ್ತ್ರದ ಗ್ರಂಥವಲ್ಲ, ಕೇವಲ ಕರ್ಮಯೋಗಶಾಸ್ತ್ರವೂ ಅಲ್ಲ, ಕೇವಲ ಸಮಾಜಶಾಸ್ತ್ರವೂ ಅಲ್ಲ. ಅವೆಲ್ಲವುಗಳನ್ನು ಮೀರಿದ ವೇದಾಂತಶಾಸ್ತ್ರವು. ಹಾಗಾದರೆ, ದೇವರನ್ನು ನಂಬದವರು ಗೀತೆಯನ್ನು ಓದಲೇ ಕೂಡದೋ-ಎಂದು ಕೆಲವರು ಆಕ್ಷೇಪಿಸಬಹುದು ಅವರಿಗೆ ಗೀತೆಯ ಸಂಪೂರ್ಣವಾದ ರಹಸ್ಯವು ತಿಳಿಯದೆಂದು ಹೇಳುತ್ತೇವಲ್ಲದೆ ಅವರಿಗೆ ಗೀತೆಯು ಪ್ರಯೋಜನವೇನೂ ಆಗಲಾರದೆಂದು ಹೇಳಲಾರೆವು. ಏಕೆಂದರೆ ಗೀತೆಯ ರಚನೆಯ ವೈಶಿಷ್ಟ್ಯವೇನೆಂದರೆ ಅದು ಸರ್ವರಿಗೂ ಸರ್ವಕಾಲಕ್ಕೂ ಉಪಯೋಗವಾಗುತ್ತದೆ. ಅಜ್ಞಾನಿಯು ಮೊದಲ್ಗೊಂಡು ಪೂರ್ಣಜ್ಞಾನವಾಗುವ ವರೆಗೆ ಎಲ್ಲ ತರಗತಿಯವರೂ ಎಲ್ಲ ತರಹದ ಪರಿಸ್ಥಿತಿಗಳಲ್ಲಿಯೂ ಅದನ್ನು ತಮ್ಮ ತಮ್ಮ ಯೋಗ್ಯತೆಯ ಮೇರೆಗೆ ಉಪಯೋಗಿಸಿಕೊಳ್ಳಬಹುದು. ಏಕೆಂದರೆ,ಅದು ಪರಮಧರ್ಮವನ್ನು ಹೇಳುತ್ತಿರುವುದರಿಂದ, ಮಿಕ್ಕ ಸಾಮಾನ್ಯ ಧರ್ಮಗಳೆಲ್ಲವೂ ಅಡಕವಾಗೇ ಆಗುತ್ತವೆ. ಆದಕಾರಣ, ನೀತಿಶಾಸ್ತ್ರ, ಸಮಾಜಶಾಸ್ತ್ರ ಆಹಾರಶಾಸ್ತ್ರ ಅಥವಾ ಮಿಕ್ಕಾವುದೇ ಶಾಸ್ತ್ರಕ್ಕೂ ಗೀತೆಯ ತತ್ತ್ವಗಳು ವಿರುದ್ಧವಾಗಿಲ್ಲ. ಆದರೆ ಆ ಶಾಸ್ತ್ರಗಳು ಇದರ ಮೇಲೆ ಅವಲಂಬಿಸಿರುತ್ತವಲ್ಲದೆ ಇದು ಅವುಗಳ ಮೇಲೆ ಅವಲಂಬಿಸಿರುವುದಿಲ್ಲ. ಗೀತೆಯು ಪರಮಾತ್ಮನ ಬಗ್ಗೆ ತೆಗೆದ 'ನಾವು ಅವುಗಳಲ್ಲಿ ಇಲ್ಲ, ಅವು ನನ್ನಲ್ಲಿ ಇವೆ' (೭.೧೨) ಎಂಬ ಉದ್ಗಾರವನ್ನು ನಾವು ಗೀತಾಶಾಸ್ತ್ರಕ್ಕೂ ಅನ್ವಯಿಸಬಹುದು.

(೨) ಇನ್ನು ಗೀತೆಯ ಎರಡನೆಯ ತತ್ತ್ವವೆಂದರೆ—ಗೀತೆಯು

ಶ್ರೀಕೃಷ್ಣನೇ ಪರಮಾತ್ಮನು, ಪರಬ್ರಹ್ಮನು ಎಂಬುದು. ಗೀತೆಯ ಕೃಷ್ಣನು ಮನುಷ್ಯನಲ್ಲ, ದೇವರು. ಗೀತೆಯಲ್ಲಿ ಆತನಿಗೆ ಕೇಶವಾದಿ ನಾನಾನಾಮಗಳಿಂದ ಸಂಬೋಧಿಸಲ್ಪಟ್ಟಿದೆ. ಉದಾ–ಕೇಶವ (೧೦.೧೪; ೩.೭; ೧೧.೩೫; ೧೮.೭೬) ಮಾಧವ (೧.೧೪; ೧.೩೭), ಗೋವಿಂದ (೨.೯;೧.೩೩), ವಿಷ್ಣು (೧೦,೨೧;೧೧.೨೧;೧೧.೩೦), ಮಧುಸೂದನ (೧.೩೫ ೨ ೧; ೨.೪; ೬-೩೩; ೮.೭), ಹೃಷೀಕೇಶ (೧.೧೫; ೧.೨೦; ೧.೨೪; ೨.೧; ೨.೧೦; ೧೧.೩೬; ೧೮.೧), ವಾಸುದೇವ (೧೦.೫೯; ೧೧.೫೦; ೧೮.೭೪), ಪುರುಷೋತ್ತಮ (೮.೩೦; ೧೦.೧೫: ೧೧.೩; ೧೫.೧೮; ೧೫.೨೭), ಅಚ್ಯುತ (೧ ೨೧; ೧೧.೪೨; ೧೮.೭೩;) ಜನಾರ್ದನ (೧.೪೪; ೩.೧; ೧೦.೧೭; ೧೦.೫೧), ಹರಿ (೧೧ ೯; ೧೮.೭೭), ಕೃಷ್ಣ (೧.೨೮; ೧.೩೨; ೧.೪೧; ೫.೧; ೬.೩೪; ೬.೩೭; ೬.೩೮; ೧೮.೭೮). ಇದರ ಮೇಲಿಂದ ಗೀತೆಯ ಕೃಷ್ಣನು ಮಾನವನಲ್ಲ, ಸಾಕ್ಷಾತ್ ಪರಮಾತ್ಮನು ಎಂಬುದು ಗೊತ್ತಾಗುವುದು. ಆತನನ್ನು ಮನುಷ್ಯನೆಂದು ತಿಳಿಯುವವರು ಮೂಢ ರೆಂದೂ ಆತನೇ ಗೀತೆಯಲ್ಲಿ ಹೇಳಿರುವನು (೯.೧೧). ಅಜ್ಞರ ಕಣ್ಣಿಗೆ ಮನುಷ್ಯಶರೀರದಂತೆ ಕಾಣುವ ಶರೀರವನ್ನು ಆತನು ಧಾರಣ ಮಾಡಿ ರುವನಲ್ಲದೆ ನಿಜವಾಗಿ ಆತನು ಅಪ್ರಾಕೃತಶರೀರವುಳ್ಳವನು. ಆತನಿಗೆ ಹುಟ್ಟು ಇಲ್ಲವೇ ಇಲ್ಲ, ಆದರೂ ಪ್ರಕೃತಿಯನ್ನು ಆಶ್ರಯಿಸಿ ಹುಟ್ಟಿದ ವನಂತೆ ತೋರಿಸಿಕೊಳ್ಳುತ್ತಾನೆ (೯.೮). ಸೂರ್ಯನು ಹೇಗೆ ಸದಾ ಇದ್ದೇ ಇರುವನೋ ಹಾಗೆಯೇ ಆತನು ಸದಾ ಇದ್ದೇ ಇರುತ್ತಾನೆ. ವ್ಯವಹಾರಕ್ಕೋಸ್ಕರ, ಜನರು ಬೆಳಗಾದ ಕೂಡಲೆ ಸೂರ್ಯನು ಮೂಡಿ ದನು–ಎಂಬುದಾಗಿ ಹೇಳುವುದಿಲ್ಲವೇ, ಹಾಗೆಯೇ ಶ್ರೀಕೃಷ್ಣನು ಹುಟ್ಟಿ ದನು ಎಂಬುದು ವ್ಯವಹಾರ ಮಾತ್ರವು. ಇಷ್ಟೇ. ಆತನು ಸರ್ವಲೋಕ ಮಹೇಶ್ವರನು. (೫.೨೯). ತನಗಿಂತ ಹೆಚ್ಚಿನವರು ಈ ಜಗತ್ತಿನಲ್ಲಿ ಇಲ್ಲ ವೆಂದು ಗೀತೆಯಲ್ಲಿ ತಾನೇ ಹೇಳಿಕೊಂಡಿದ್ದಾನೆ (೭.೭); ತಾನೇ ಪರಮ ವಸ್ತುವು (೭.೨೪) ಎಂದು ಹೇಳಿಕೊಂಡಿರುವನು. ಅರ್ಜುನನು ಕೂಡ ಶ್ರೀಕೃಷ್ಣನು ಪರಮಾತ್ಮನೆಂದೇ ಭಾವಿಸಿದ್ದನು. ಅಂತಲೇ ಆತನು ನೀನೇ ಪರಂಬ್ರಹ್ಮನು, ಪರಂಧಾಮನು ಎಂದು ಮುಂತಾಗಿ ಸ್ತೋತ್ರ ಮಾಡಿ

ರುವನು (೧೦.೧೨, ೧೩, ೧೪); ಲೋಕಕ್ಕೆ ನೀನೇ ತಂದೆಯೂ, ನೀನೇ ತಾಯಿಯೂ, ನೀನೇ ಗುರುವು ಮುಂತಾಗಿ ಹೊಗಳಿರುವನು (೧೧.೪೩). ೧೫ ನೆಯ ಅಧ್ಯಾಯದಲ್ಲಿ ಲೋಕದಲ್ಲಿ ಕ್ಷರ ಮತ್ತು ಅಕ್ಷರ ಎಂಬಿಬ್ಬರು ಪುರುಷರಿದ್ದು ತಾನು ಅವರನ್ನು ಮೀರಿದ ಪುರುಷೋತ್ತಮನು ಎಂದು ಹೇಳಿಕೊಂಡಿರುವನು. (೧೫ ೧೬ರಿಂದ ೨೦). ಬ್ರಹ್ಮನಿಗೂ ಕೂಡ ಆತನು ಆದಿಕರ್ತನು (೧೧.೩೭), ಬ್ರಹ್ಮಳಿಗೆ ಎಂದರೆ ಲಕ್ಷ್ಮಿಗೆ ಆಶ್ರಯನು (೧೪.೨೭) ಎಂದು ಆತನ ವರ್ಣನೆಯುಂಟು. ಇದರಿಂದ ಶ್ರೀಕೃಷ್ಣನೇ ಪರಮಾತ್ಮನೆಂಬುದಕ್ಕೆ ತಿಲಪ್ರಾಯವೂ ಸಂದೇಹವಿಲ್ಲ.

ಮತ್ತೇನೆಂದರೆ, ಪರಮಾತ್ಮನೆಂದರೂ ಒಂದೇ ಪರಂಬ್ರಹ್ಮನೆಂದರೂ ಒಂದೇ. ಒಮ್ಮೊಮ್ಮೆ ಆತನು ಆ ಪರಮಪುರುಷನನ್ನು ಪುಲ್ಲಿಂಗದಲ್ಲಿಯೂ ಒಮ್ಮೊಮ್ಮೆ ಬ್ರಹ್ಮವೆಂಬುದಾಗಿ ನಪುಂಸಕಲಿಂಗದಲ್ಲಿಯೂ ಕರೆದಿರುವನು. ಒಮ್ಮೊಮ್ಮೆ ಆತನನ್ನು ತೃತಿಯ ಪುರುಷದಲ್ಲಿ ಉಲ್ಲೇಖಿಸಿ, ಕೂಡಲೆ, ಆತನು ಮತ್ತಾರೂ ಅಲ್ಲ, ತಾನೇ ಎಂಬುದಾಗಿ ಪ್ರಥಮ ಪುರುಷದಲ್ಲಿಯೇ ನಿರ್ದೇಶಿಸಿರುವನು. ಪರಮಾತ್ಮಾ (೬..೭; ೧೩.೨೩; ೧೩.೩೨; ೧೫.೧೭), ಪರಮಪುರುಷ (೮ ೮, ೧೪), ಪರಮೇಶ್ವರ (೧೩.೨೮), ಈಶ್ವರ (೧೫.೧೮) ಇವು ತೃತಿಯ ಪುರುಷದಲ್ಲಿ ಆತನು ಉಲ್ಲೇಖಿಸಲ್ಪಟ್ಟದ್ದಕ್ಕೆ ಉದಾಹರಣೆಗಳು. ಬ್ರಹ್ಮಶಬ್ದದಿಂದ ಆತನ ಉಲ್ಲೇಖವು ಪ್ರತ್ಯಕ್ಷವಾಗಿಯೂ ಅಪ್ರತ್ಯಕ್ಷವಾಗಿಯೂ ೩.೧೫; ೪.೨೪; ೫.೬; ೫.೧೦; ೫.೧೯; ೫.೨೧; ೫.೨೪; ೫.೨೫; ೫.೨೬; ೬.೨೭; ೬.೨೮; ೬.೪೪; ೮.೫ ಮುಂತಾದ ಅನೇಕ ಶ್ಲೋಕಗಳಲ್ಲಿ ಬಂದಿರುವುದು. ಬರೀ ಪುಲ್ಲಿಂಗದಲ್ಲಿ ಕರೆದರೆ, ಮಿಕ್ಕ ಪುರುಷರಂತೆಯೇ ತಾನು ಒಬ್ಬ ಪುರುಷನು ಎಂದು ಜನರು ಎಲ್ಲಿ ಕಲ್ಪಿಸುವರೋ ಎಂದು ತಿಳಿದು, ಮಿಕ್ಕ ಪುರುಷರಂತೆ ತಾನು ಗಂಡಸೂ ಅಲ್ಲ, ಹೆಂಗಸೂ ಅಲ್ಲವೆಂಬುದನ್ನು ಹೇಳುವುದಕ್ಕಾಗಿ, ತನ್ನನ್ನು ಬ್ರಹ್ಮವೆಂಬುದಾಗಿ ನಪುಂಸಕದಲ್ಲಿ ಉಲ್ಲೇಖಿಸಿಕೊಂಡಿರುವನು. ಮತ್ತು ಹೀಗೆ ನಪುಂಸಕದಲ್ಲಿ ಉಲ್ಲೇಖಿಸಿಕೊಂಡರೆ ತಾನೊಬ್ಬ ಚೈತನ್ಯವಿಲ್ಲದ ಜಡವಸ್ತುವೆಂದು ಎಲ್ಲಿ ಭಾವಾದೀತೋ ಎಂದು, ಕೂಡಲೆ, ಆ ಬ್ರಹ್ಮನು ಬೇರೆ ಯಾರೂ ಅಲ್ಲ, ತಾನೇ ಎಂದು

ಹೇಳಿರುವನು. ಸಾರಾಂಶ, ಗೀತೆಯಲ್ಲಿ, ಶ್ರೀಕೃಷ್ಣ, ಪರಮಾತ್ಮ, ಪರ ಬ್ರಹ್ಮ ಇವುಗಳೊಳಗೆ ಯತ್ಕಿಂಚಿತ್ತಾದರೂ ಭೇದಮಾಡಿರುವುದಿಲ್ಲ. ಅಂತಕಾಲದಲ್ಲಿ ಕೂಡ ಬ್ರಾಹ್ಮೀ ಸ್ಥಿತಿಯಲ್ಲಿದ್ದ ಮನುಷ್ಯನು ಆ ನಿರ್ವಾಣ ಬ್ರಹ್ಮನನ್ನು ಹೊಂದುತ್ತಾನೆಂದು ೨.೭೨ ರಲ್ಲಿ ಹೇಳಿ, ಹಾಗೆ ಅಂತ ಕಾಲದ ಸ್ಮರಣೆಗೆ ನಾನೇ ವಿಷಯನು ಎಂದು ೮.೫ ರಲ್ಲಿ ಹೇಳಿರುವನು. ಹಾಗೆಯೇ, ಕರ್ಮವು ಬ್ರಹ್ಮನಿಂದ ಹುಟ್ಟಿದ್ದು, ಬ್ರಹ್ಮನು ವೇದಗಳಿಂದ ತಿಳಿಯಲ್ಪಡತಕ್ಕವನು, ಆದಕಾರಣ, ಸರ್ವಗತನಾದ ಬ್ರಹ್ಮನು ನಿತ್ಯ ವಾಗಿ ಯಜ್ಞದಲ್ಲಿ ಪ್ರತಿಷ್ಠಿತನಾಗಿರುತ್ತಾನೆ (೩.೧೫) ಎಂದು ಒಂದು ಕಡೆಗೆ ಹೇಳಿದರೆ ಮತ್ತೊಂದು ಕಡೆಗೆ ಸರ್ವಕರ್ಮಗಳನ್ನು ನನಗೆ ಸಮ ರ್ಪಿಸು (೩.೩೦) ಎಂದೂ, ಸರ್ವವೇದಗಳಿಂದ ತಿಳಿಯಲ್ಪಡತಕ್ಕವನು ನಾನು (೧೫.೧೫) ಎಂದೂ ಹೇಳಿರುವನು. ಬುದ್ಧಿಯ ಆಚೆಗೆ ಇರುವವನು ಆತನು (೩.೪೨) ಎಂದು ಒಂದೆಡೆಗೆ ಹೇಳಿದ್ದರೆ, ಮತ್ತೊಂದೆಡೆಗೆ ಬುದ್ಧಿ ಮುಂತಾದವುಗಳೆಲ್ಲವೂ ತನ್ನಿಂದಲೇ ಹುಟ್ಟಿವೆ (೧೦.೫) ಎಂದೂ ಹೇಳಿ ರುವನು. ಬ್ರಹ್ಮನೇ ನಮ್ಮ ಗಮನದ ಧ್ಯೇಯನು,ಎಂದರೆ, ನಾವೆಲ್ಲರೂ ಹೋಗತಕ್ಕದ್ದು ಬ್ರಹ್ಮನ ಕಡೆಗೆ (೪.೨೪ ೧೫.೪) ಎಂದು ಹೇಳಿ, ನಾನೇ ಗಮ್ಯವಸ್ತುವು, ಎಲ್ಲರೂ ನನ್ನನ್ನು ಹೊಂದುವುದನ್ನೇ ಧ್ಯೇಯವನ್ನಾಗಿ ಇಟ್ಟುಕೊಳ್ಳಬೇಕೆಂದು ಹೇಳಿರುವನು, (೮.೧೦; ೭.೧೮;) ೮.೩೦ ರಲ್ಲಿ ಬ್ರಹ್ಮನನ್ನು ಸಂಪೂರ್ಣವಾಗಿ ತಿಳಿದವರು ಯಾರು ಎಂಬುದನ್ನು ಹೇಳಿ, ಕೂಡಲೆ, ೮.೩೧ ರಲ್ಲಿ ತಾನೇ ಆ ಬ್ರಹ್ಮನೆಂಬುದನ್ನು ಸ್ಪಷ್ಟವಾಗಿ ತೋರಿಸಿಕೊಂಡಿರುವನು. ಪರಮಅಕ್ಷರನು ಆ ಬ್ರಹ್ಮನು (೮.೩) ಎಂದು ಬ್ರಹ್ಮನನ್ನು 'ಪರಮಾಕ್ಷರನೆಂದು ವರ್ಣಿಸಿದಂತೆಯೇ ಪರಮಾಕ್ಷರ ನೊಬ್ಬನು ಇರುತ್ತಾನೆಂದೂ ಆತನಿಗೆ ಪರಮಾತ್ಮನು,ಪುರುಷೋತ್ತಮನು ಎಂದೆನ್ನುತ್ತಾರೆಂದೂ (೧೫ ೧೮) ಹೇಳಿದ್ದಾನೆ. ಭಕ್ತಿಯಿಂದ ಪರಮಪುರು ಷನು ಲಭ್ಯನು (೮.೧೦) ಎಂದು ಹೇಳಿ, ಆ ಪರಮಪುರುಷನು ತಾನೇ ಎಂದು (೮.೧೪) ತೋರಿಸಿದ್ದಾನೆ. ೧೩.೧೩ ರಲ್ಲಿ ಆ ಜ್ಞೇಯ ವಸ್ತುವು ಅನಾದಿಯಾದ ಬ್ರಹ್ಮವೆಂದು ಹೇಳಿ,೧೪.೨ ರಲ್ಲಿ ಜ್ಞಾನವನ್ನು ಆಶ್ರಯಿಸಿ ದವರು ತನ್ನ ಸಾಧರ್ಮ್ಯವನ್ನು ಹೊಂದುತ್ತಾರೆಂದು ಹೇಳಿರುವನು;

ಸರ್ವರ ಹೃದಯದಲ್ಲಿರುವವನು ಈಶ್ವರನು (೧೮.೬೧) ಎಂದು ಒಂದು ಕಡೆಗೆ ಹೇಳಿದ್ದರೆ, ಸರ್ವರ ಹೃದಯದಲ್ಲಿ ಇರುವವನು ನಾನು (೧೫.೧೫) ಎಂದು ಹೇಳಿ ಆ ಈಶ್ವರನಿಗೂ ತನಗೂ ತಾದಾತ್ಮ್ಯವನ್ನು ತೋರಿಸಿರುವನು. ಹೀಗೆ ನಾನಾವಿಧವಾಗಿ ಗೀತೆಯಲ್ಲಿ ತಾನೇ ಶ್ರೀಕೃಷ್ಣನು ತಾನೇ ಪರಮಾತ್ಮನು, ತಾನೇ ಪರಬ್ರಹ್ಮನು ಎಂಬುದನ್ನು ಸ್ಪಷ್ಟವಾಗಿ ಹೇಳಿರುವನು. ಇದರಿಂದ, ಗೀತೆಯು ಮಿಕ್ಕ ಪುಸ್ತಕಗಳಂತೆ ಓದತಕ್ಕ ಪುಸ್ತಕವಲ್ಲವೆಂಬುದೂ ಇದನ್ನು ಓದುವವರಲ್ಲಿ ಒಂದು ವಿಲಕ್ಷಣವಾದ ಮನೋಭೂಮಿಕೆಯು ಸಿದ್ಧವಾಗಿರಬೇಕೆಂಬುದೂ ಗೊತ್ತಾಗುವುದು. ಹಾಗಿಲ್ಲದೆ ಓದಲಿಕ್ಕೆ ಹೋದರೆ. ಗೀತೆಯಲ್ಲಿಯ ಶ್ರೀಕೃಷ್ಣನ ಅಹಂಭಾವವನ್ನು ನೋಡಿ ಬೆರಗಾಗಬೇಕಾದೀತು !

೩. ನೆನಪಿನಲ್ಲಿಡತಕ್ಕ ಮೂರನೆಯ ಮಾತೇನೆಂದರೆ ಪರಮಾತ್ಮನು ಸಕಲ ಜಗತ್ತನ್ನೂ ಜಗತ್ತಿನೊಳಗಿನ ನಾನಾವಿಧ ಪ್ರಾಣಿಗಳನ್ನೂ ಹುಟ್ಟಿಸಿದ್ದಾನೆಂಬುದು. ಪರಮಾತ್ಮನಿಗೆ ಇದೊಂದು ಆಟವು. ಈ ಆಟವಾಡುವುದರಲ್ಲಿಯೇ ಆತನಿಗೆ ಆನಂದ.

> ಮಳಲ ಮನೆಗಳ ಮಾಡಿ ಮಕ್ಕಳು । ಕೆಲವು ಕಾಲದಲಾಡಿ ಪೋದರಿ !
> ತುಳಿದು ಕೆಡಿಸುವ ತೆರದಿ, ಲಕ್ಷ್ಮೀರಮಣ ಲೋಕಗಳಾ ॥
> ಹಲವು ಬಗೆಯಲಿ ನಿರ್ಮಿಸುವ ನಿ । ಶ್ಚಲನು ತಾನಾಗಿದ್ದು ಸಲಹುವ ।
> ನೆಲರುಣಿಯವೋಲ್ ನುಂಗುವಗೆ ಎಲ್ಲಿಹದೋ ಸುಖದುಃಖ
>
> —ಹರಿಕಥಾಮೃತಸಾರ

ಎಂಬಂತೆ, ಪರಮಾತ್ಮನಿಗೆ ಇದೊಂದು ಲೀಲೆ, ಕ್ರೀಡೆ. ಅದನ್ನು ಆತನು ಏಕೆ ಆಡುತ್ತಾನೆಂಬುದನ್ನು ಆತನೇ ಬಲ್ಲ. ಆದರೆ, ಒಂದು ಮಾತನ್ನು ಮಾತ್ರ ನಾವು ಆ ವಿಷಯವಾಗಿ ಊಹಿಸಬಹುದು. ಅದೇನೆಂದರೆ, ಹೀಗೆ ಆತನು ಕ್ರೀಡೆಯನ್ನಾಡುವುದರಿಂದ, ಸಕಲಜೀವರುಗಳಿಗೆ ತಮತಮಗೆ ಯೋಗ್ಯವಾದ ಸಾಧನಗಳನ್ನು ಕೈಕೊಂಡು, ಆತನೆಡೆ ಹೋಗಲು ಅನುವು ಉಂಟಾಗಿರುತ್ತದೆ. ಆದುದರಿಂದಲೇ ಜಗನ್ನಾಥದಾಸರು

> "ಕ್ರೀಡೆಗೋಸುಗ ಅವರವರ ಗತಿ । ನೀಡಲೋಸುಗ ದೇಹಗಳ ಕೊ ।
> ಟ್ಟಾಡುವನು ಸ್ವೇಚ್ಛೆಯಲಿ"

ಎಂದು ಹಾಡಿರುವರು. ಆತನು ಜಗತ್ತಿನ ಮೂಲರೂಪವಾದ ಪ್ರಕೃತಿ

ಯನ್ನೂ, ಜಗತ್ತಿನ ನಾಟ್ಯರಂಗದಲ್ಲಿ ಆಟ ಆಡುವ ನಾನಾವಿಧ ಜೀವಗಳನ್ನೂ ಹೇಗೆ ಹುಟ್ಟಿಸಿದನೆಂಬುದು ನಮ್ಮ ಮಾನವ ಬುದ್ಧಿಗೆ ನಿಲುಕದ ಮಾತು. ಆದರೆ, ಹಿಂದೆ ಹೇಳಿದಂತೆ, ಪರದೆಯು ಎತ್ತಲ್ಪಟ್ಟ ಕೂಡಲೆ, ಹೀಗೆ ನಾನಾವಿಧ ಜೀವಗಳು ತಮ್ಮ ತಮ್ಮ ಪಾತ್ರಗಳನ್ನು ಆಡುತ್ತಿರುವುದು ಮಾತ್ರ ನಮ್ಮ ದೃಷ್ಟಿಗೆ ಬೀಳುತ್ತದೆ. ಆ ಜೀವರುಗಳು ಒಬ್ಬರಂತೆ ಒಬ್ಬರಿಲ್ಲ. ಪ್ರತಿಯೊಬ್ಬರ ಸ್ವರೂಪ ಬೇರೆ, ಶಕ್ತಿ ಬೇರೆ, ಆಡುವ ಆಟಬೇರೆ, ಹಿಡಿಯುವ ಮಾರ್ಗ ಬೇರೆ ಎಂಬುದು ಮಾತ್ರ ನಿರ್ವಿವಾದವಿದೆ ಆ ಜೀವರೆಲ್ಲರೂ ದೇವರಂತೆ ಮಹಾಶಕ್ತಿಯುಳ್ಳವರಲ್ಲ. ಅವೆಲ್ಲ ಜೀವರುಗಳನ್ನು ಈಶ್ವರನು ಸೂತ್ರ ಗೊಂಬೆಗಳಂತೆ ಒಬ್ಬನೇ ಕುಣಿಸುತ್ತಾನೆ.

ನಾನು ಸದ್ಗುಣ ಪೂರ್ಣ, ಮಂದ್ಯನು ।
ಹೀನಗುಣವಿಂ ಜೀವನಿಪ್ಪನು ।
ನಾನು ಲಕ್ಷ್ಮೀರಮಣ, ಜೀವನು ಶತದರಿದ್ರನೆಲ್ಲೈ ॥
ನಾನು ಸುರಮುನಿಸೇವ್ಯಚರಣನು ।
ಕಾಣು ಜೀವ ನಿರಂಘ್ರಿಕರಣನು ।
ನಾನು ಸಾವಿಲ್ಲದವನು ಜೀವನ ಮೃತ್ಯುಕೊಲುವದೆಲ್ಲೈ ॥

—ವಾದಿರಾಜ

ಹೀಗೆ ವಾದಿರಾಜ ಸ್ವಾಮಿಗಳು ಜೀವನ ಅಲ್ಪತೆಯನ್ನು ವರ್ಣಿಸಿದುದು ಸುಳ್ಳೇ ? ಪರಮಾತ್ಮನಿಗೂ ಜೀವನಿಗೂ ಇರುವ ಭೇದವನ್ನು ವಾದಿರಾಜರು ಮತ್ತೆ ಹೀಗೆ ಬಣ್ಣಿಸಿರುವರು.

ನಾನು ಸುಜ್ಞನು ಜೀವನಜ್ಞನು ।
ನಾನು ಮುಕ್ತನು ಜೀವಬದ್ಧನು ।
ನಾನು ಪಾತಕಹೀನ, ಜೀವನು ಪಾಪಭರಿತನೆಲ್ಲೈ ॥
ನಾನು ಜನ್ಮವಿದೂರ ನಾನು ।
ಯೋನಿಯಲಿ ಜನಿಸುತಿಹ ಜೀವನಾ ।
ಮಾಣು ಫಲವನು ನನ್ನ ಜನಕನ ಹೆಸರ ಹೇಳಿನ್ನು ॥

ಎಂಬುದನ್ನು ನೆನಪಿನಲ್ಲಿಟ್ಟುಕೊಂಡು ನಾವು ನಮ್ಮ ಉನ್ನತಿಮಾರ್ಗವನ್ನು ಕಂಡುಕೊಳ್ಳಬೇಕು. ೪. ನೆನಪಿನಲ್ಲಿಡತಕ್ಕ ನಾಲ್ಕನೆಯ ಮಾತೇ

ಸಂಬರೆ ಮೋಕ್ಷದ ಕಲ್ಪನೆಯು. ಈ ಸಂಸಾರಸಾಗರದೊಳಗಿಂದ ಈಸಿ ಹೋಗಿ ಪರಮಾತ್ಮನನ್ನು ಪಡೆಯುವುದೇ ಎಲ್ಲರ ಧ್ಯೇಯ. ಈ ಮುಕ್ತಿಯ ಕಲ್ಪನೆಯು ಬಹಳ ವಿಲಕ್ಷಣವಾದ ಕಲ್ಪನೆಯು. ಅದು ಬಲು ದೂರದ ಧ್ಯೇಯವು. ಅತಿಶಯ ಎತ್ತರವಾಗಿ ತೂಗಿಡಲ್ಪಟ್ಟ ಮಧುರವಾದ ಹಣ್ಣು ಅದು. ಅದು ಎಷ್ಟು ಎತ್ತರದಲ್ಲಿ ಇಡಲ್ಪಟ್ಟಿರುವದೆಂದರೆ, ಅದರ ಕಡೆಗೆ ನೋಡಿದರೇ ಮೊದಲಿಗೆ ತಲೆ ತಿರುಗುತ್ತದೆ! ಜೀವನಿಗೆ ಶಾಶ್ವತವಾದ ಸುಖವು ಸಿಕ್ಕಬೇಕಾದರೆ ಮುಕ್ತಿಯಲ್ಲಿಯೇ. ಮುಕ್ತಿಯೆಂದರೆ, ಈ ಭೌತಿಕ ಶರೀರದಿಂದ ಬಿಡುಗಡೆ ಹೊಂದುವುದು. ಭೌತಿಕ ಶರೀರದ ಸೆರೆ ಮನೆಯಲ್ಲಿ ಜೀವನು ಸಿಕ್ಕಿರುವವರೆಗೆ ಆತನಿಗೆ ನಿಜವಾದ ಸುಖವಿಲ್ಲ ಭೌತಿಕ ಶರೀರವು ಸರ್ವಸುಖದುಃಖಗಳಿಗೆ ಮೂಲವು-ಎಂಬ ವಿಚಾರ ಗಳು ನಮ್ಮ ಜನರ ಮನವನ್ನು ಸಂಪೂರ್ಣವಾಗಿ ಆಕ್ರಮಿಸಿ ಬಿಟ್ಟಿವೆ. ಈ ಮೋಕ್ಷದ ಕಲ್ಪನೆಗೆ ನಮ್ಮ ಜನರು ಅಂಟಿಕೊಳ್ಳುವಷ್ಟು ಮತ್ತಾವ ಜನಾಂಗವೂ ಅಂಟಿಕೊಳ್ಳುವುದಿಲ್ಲ.

"ಜನನ ಮರಣವೆಂದೆನ್ನ ನೊಣನೊಡನೆ ಮೇಲ್ವಾಯ್ದು ।
ಒರಿಯ ಪುಲಿಯಂತಹರಿ ತಿಂದು. ತೇಗುತಿಹವು ॥"

ಎಂದು ಕೈವಲ್ಯಕಲ್ಪವಲ್ಲರಿಯಲ್ಲಿ ಹೇಳಿದಂತೆ ನಮ್ಮ ಜನರು ಜನನ ಮರಣದ ಸುತ್ತಿಗೆ ಬಹಳ ಬೆದರುತ್ತಾರೆ. ಇವುಗಳ ಕಾಟವನ್ನು ತಪ್ಪಿಸಿ ಕೊಳ್ಳುವುದೇ ಮುಕ್ತಿ. ಆದರೆ ಸಾಯುವ ಮಾತ್ರದಿಂದ ಈ ಕಾಟವು ತಪ್ಪಲಾರದೆಂದೂ ನಮ್ಮ ಸಿದ್ಧಾಂತ ಆದಕಾರಣವೇ, ಜನನಮರಣದ ಕಾಟವನ್ನು ತಪ್ಪಿಸುವುದಕ್ಕೆ ಅವರು ಸಂಸಾರದಿಂದ ಓಡಿಹೋಗುವು ದನ್ನು ಉಪದೇಶಿಸದೆ, ಅದನ್ನು ಇದಿರಿಸುವ ಗಂಡುವೇದಾಂತವನ್ನು ಉಪದೇಶಿಸಿದ್ದಾರೆ. ಶರೀರವು ಬಂಧನವೇನೋ ಅಹುದು. ಆದರೆ, ಮುಕ್ತಿಗೆ ಈ ಸೆರೆಮನೆಯೊಳಗಿಂದಲೇ ದಾರಿ ಇರುತ್ತದಲ್ಲದೆ ಅದಕ್ಕೆ ಬೇರೆ ದಾರಿ ಇಲ್ಲ. ಸಂಸಾರಸಾಗರವನ್ನು ದಾಟುವುದಕ್ಕೆ ಈ ಶರೀರವು ಒಂದು ನಾವೆಯು. ಹೀಗೆ ಮೋಕ್ಷದ ಕಲ್ಪನೆಯು ಅತ್ಯಂತ ಉಚ್ಚವಾ ದುದೂ ದೂರದಲ್ಲಿದ್ದುದೂ ಇರುವುದರಿಂದ ಅದರಲ್ಲಿ ತೀವ್ರವೇ ಜನರ ವಿಶ್ವಾಸವು ಹುಟ್ಟುವುದಿಲ್ಲ. ಹುಟ್ಟಿದರೂ ಮೇಲಿಂದ ಮೇಲೆ ಸಡಿಲಾಗು

ತ್ತದೆ, ಮತ್ತು ಕಡಿಮೆ ತರಗತಿಯ ಧ್ಯೇಯಗಳ ಮೋಹಕ್ಕೆ ಮನುಷ್ಯನು ಬಲಿಬೀಳುತ್ತಾನೆ. ಆದರೆ, ಈ ಮೋಕ್ಷದ ಧ್ಯೇಯದ ಮೇಲೆಯೇ ನಮ್ಮ ನೀತಿಶಾಸ್ತ್ರ ಸಮಾಜಶಾಸ್ತ್ರ ಮುಂತಾದವುಗಳೆಲ್ಲವೂ ರಚಿತ ವಾಗಿರುವುದರಿಂದ, ಈ ಕಲ್ಪನೆಯನ್ನು ಬಿಟ್ಟುಕೊಟ್ಟರೆ ಗೀತೆಯ ಸಿದ್ಧಾಂತಗಳ ರಹಸ್ಯವು ಎಂದೂ ತಿಳಿಯಲಾರದು ಮೋಕ್ಷವೇ ನಮ್ಮ ಜೀವಿತದ ಯಾವತ್ತು ಕೃತ್ಯಗಳ ಗುರಿಯಾಗಿರಬೇಕು. ಅದು ಈ ಜನ್ಮ ದಲ್ಲಿಯೇ ಸಾಧಿಸಲಿ, ಅಥವಾ ಅದನ್ನು ಸಾಧಿಸುವುದಕ್ಕೆ ಸಾವಿರಾರು ಜನ್ಮಗಳೇ ಬೇಕಾಗಲಿ, ಆ ಧ್ಯೇಯವನ್ನು ಪಡೆದೇ ತೀರುವೆವೆಂದು ನಮ್ಮ ಜನರ ಹಟ, ದೃಢವಾದ ವಿಶ್ವಾಸ. ಈ ಧ್ಯೇಯದಲ್ಲಿಯ ವಿಶ್ವಾ ಸವು ಎಳ್ಳುಕಾಳಿನಷ್ಟೇ ಕಡಿಮೆಯಾದರೆ ಸಾಕು, ಮನುಷ್ಯನು ಹಿಂದೂ ಧರ್ಮದಿಂದ ಪತಿತನಾಗುತ್ತಾನೆ. ಮೋಕ್ಷವು ಬಲು ದೂರದ ಮೆಟ್ಟಲು. ನಮ್ಮ ಕಣ್ಣಿಗೆ, ಬಿಕೆ, ಕಲ್ಪನೆಗೆ ಕೂಡ ಬೇಗನೆ ಕಾಣದಂಥ ಮೆಟ್ಟಲು. ಆದಕಾರಣ, ನಾವು ಮುಂಚೆ ಅದನ್ನು ಕೇವಲ ಶ್ರದ್ಧೆಯಿಂದಲೇ ನಂಬ ಬೇಕಾಗುತ್ತದೆ ಮೋಕ್ಷವೆಂದರೆ ಪೂರ್ಣ ಸುಖಮಯವಾದ ಶಾಂತಿ ಮಯವಾದ ಸ್ಥಿತಿ. ಅಂಥ ಸ್ಥಿತಿಯನ್ನು ಜೀವನು ಹೊಂದುವನೆಂದು ನಮ್ಮ ಜನರ ವಿಶ್ವಾಸ. ಆದಕಾರಣ, ಅದಕ್ಕೆ ಹೋಲಿಸಿ, ಈ ಸಂಸಾ ರವು ದುಃಖಮಯವೆಂದೆನ್ನುವುದು ನಮ್ಮ ಜನರ ಪದ್ಧತಿ. ಮೋಕ್ಷದ ಕಲ್ಪನೆಯ ಸಂಬಂಧವಾಗಿ ನಮ್ಮ ಜನರಲ್ಲಿ ಎಷ್ಟೇ ಸೂಕ್ಷ್ಮ ಮತಭೇದ ಗಳಿದ್ದರೂ, ಮೋಕ್ಷವೆಂದರೆ ಭೌತಿಕ ಬಂಧನದಿಂದ ಬಿಡುಗಡೆ ಹೊಂದಿ ಜೀವನು ತನ್ನ ಸ್ವರೂಪಾನಂದದ ಸುಖವನ್ನು ಪಡೆಯುತ್ತಾನೆಂಬುದು ಎಲ್ಲರಿಗೂ ಮಾನ್ಯವಾದ ಮಾತು.

ನಮ್ಮ ವೇದಾಂತದಲ್ಲಿ, ಸಮಾಜಶಾಸ್ತ್ರದಲ್ಲಿ, ಮತ್ತು ಪ್ರತಿ ಯೊಂದು ಶಾಸ್ತ್ರದಲ್ಲಿ ನಿರಾಶೆಯ ಮತ್ತು ದುಃಖದ ನೆರಳು ಬೀಳಲಿಕ್ಕೆ ಸಂಸಾರವು ದುಃಖಮಯವೆಂಬ ಕಲ್ಪನೆಯೇ ಮೂಲಕಾರಣವೆಂಬು ದನ್ನು ನಾವು ಒಪ್ಪಲೇಬೇಕು. ಮುಂಚೆ ಆ ಕಲ್ಪನೆಯು ಹೊರಟಿದ್ದೇನೋ, ಪರಮಧ್ಯೇಯವಾದ ಮೋಕ್ಷದ ಅತ್ಯುಚ್ಚವಾದ, ಶಾಶ್ವತವಾದ ಸುಖಕ್ಕೆ ಹೋಲಿಸಿದರೆ, ಆ ಮಾನದಿಂದ ಈ ಸಂಸಾರವು ಕಡಿಮೆಯದು,

ಕ್ಷಣಭಂಗುರವಾದುದು, ಎಂಬ ಕಲ್ಪನೆಯಿಂದ ಹೊರಟಿತು. ಆದರೆ, ಕೂಡಲೆ ಅದರ ಅತಿರೇಕವಾಗಿ,ಜನರು, ಸಂಸಾರವು ಶುದ್ಧವಾಗಿ-ಕೇವಲವಾಗಿ-ಪೂರ್ಣವಾಗಿ ದುಃಖಮಯವೆಂದು ಕೂಗಹತ್ತಿದರು ! ಜಗತ್ತಿನೊಳಗಿಂದ ಓಡಿ ಹೋಗುವುದು, ಶರೀರದ ಸೆರೆಮನೆಯೊಳಗಿಂದ ತಪ್ಪಿಸಿಕೊಳ್ಳುವುದು ಮನುಷ್ಯನ ಧ್ಯೇಯವೆಂದು ಸಾರಹತ್ತಿದರು !

ಆದರೆ, ನಿಜವಾಗಿ ಈ ಜೀವಿತವನ್ನು ನಮ್ಮ ಋಷಿಗಳು ಎಂದಿಗೂ ಇಷ್ಟು ತುಚ್ಛವಾಗಿ ಪರಿಗಣಿಸಿರುವುದಿಲ್ಲ. ಈ ಜೀವಿತವು ಮೋಕ್ಷಕ್ಕೆ ಹೋಗುವ ಹೆದ್ದಾರಿಯು. ಆ ಆನಂದಮಯವಾದ ಉದ್ಯಾನಕ್ಕೆ ಹೋಗುವುದಕ್ಕೆ ಈ ಶರೀರವು ಹೆಬ್ಬಾಗಿಲು. ಆ ಸುಖಪೂರ್ಣವಾದ ದಡಕ್ಕೆ ಮುಟ್ಟಬೇಕಾದರೆ ಸುಖದುಃಖ ಮಿಶ್ರಿತವಾದ ಸಂಸಾರ ಸಾಗರದೊಳಗಿಂದಲೇ ಈಸಿ ಹೋಗಬೇಕು. ಇಷ್ಟೇ ಅಲ್ಲ. ಈ ಶರೀದಲ್ಲಿರುವಾಗ ಕೂಡ, ಬಲುಮಟ್ಟಿಗೆ, ಆ ಸುಖದುಃಖಮಯವಾದ ಸಂಸಾರವನ್ನು ಸುಖಮಯವನ್ನಾಗಿ ಮಾಡಿಕೊಳ್ಳುವ ಶಕ್ತಿಯು ಮನುಷ್ಯನಲ್ಲಿ ಇರುತ್ತದೆ (೫.೨೩). ಹಾಗೆ ಹೇಗೆ ಮಾಡಿಕೊಳ್ಳಬಹುದೆಂಬುದರ ಯುಕ್ತಿಯನ್ನು ಹೇಳುವುದೇ ಗೀತೆಯ ಮುಖ್ಯ ಗುರಿ.

ಸಾರಾಂಶ, ಗೀತೆಯ ಮುಖ್ಯ ಧ್ಯೇಯವು ಮೋಕ್ಷವು. ಅದು ಮೋಕ್ಷಕ್ಕೆ ಒಯ್ಯುವ ಸಾಧನಗಳನ್ನು ಹೇಳುವ ಶಾಸ್ತ್ರವು. ಅದು ನೀತಿಶಾಸ್ತ್ರವಲ್ಲ, ರಾಜಕಾರಣ ಶಾಸ್ತ್ರವಲ್ಲ, ಸಮಾಜ ಶಾಸ್ತ್ರವಲ್ಲ. ಇವೆಲ್ಲವುಗಳ ಪರ್ಯವಸಾನವಾದ ಶಾಸ್ತ್ರವು. ಧರ್ಮ ಅರ್ಥ ಕಾಮ ಮುಂತಾದ ಅನ್ಯಪುರುಷಾರ್ಥಗಳೆಲ್ಲವೂ ನಡುವಿನ ನಿಲ್ಮನೆಗಳು. ಮುಖ್ಯ ನಿಲ್ಮನೆಯಲ್ಲ. ಆ ನಡುವಿನ ಧ್ಯೇಯಗಳ ಸಾಧನಗಳನ್ನು ಗೀತೆಯು ವಿವರಿಸುವುದಿಲ್ಲ. ಅದು ಕೇವಲ ಮುಕ್ತಿಯೊಂದನ್ನೇ ತನ್ನ ಮುಖ್ಯ ಧ್ಯೇಯವನ್ನಾಗಿ ಇಟ್ಟುಕೊಂಡು ಅದನ್ನು ಸಂಪಾದಿಸುವ ಮುಖ್ಯ ಸಾಧನ ಅಥವಾ ಪರಮಧರ್ಮವಾವುದೆಂಬುದನ್ನು ಹೇಳುತ್ತದೆ. ಸಂಸಾರವು ಬಂಧನವೇನೋ ಅಹುದು, ಆದರೆ ಅನಿವಾರ್ಯವಾದ ಬಂಧನವು. ಮೋಕ್ಷವನ್ನು ದೊರಕಿಸಲಿಕ್ಕೆ ಅವಶ್ಯವಾದ ಬಂಧ

ನವು. ಜಡಕ್ಕೆ ಮುಕ್ತಿಯ ಸುಖವೇನು ಗೊತ್ತು? ಜೀವನಿಗೆ ಮಾತ್ರ ಅದು ಗೊತ್ತು. ಬಂಧನದಲ್ಲಿದ್ದವರಿಗೆ ಬಿಡುಗಡೆಯ ಆನಂದ.

ಮೋಕ್ಷಕ್ಕೆ ಗೀತೆಯು ಎಷ್ಟು ಮಹತ್ವವನ್ನು ಕೊಡುತ್ತದೆಂಬುದನ್ನು ನೋಡಬೇಕಾದರೆ, ಗೀತೆಯು, ಮೋಕ್ಷದಲ್ಲಿ ಅಡಕವಾಗಿರುವ ತತ್ವಗಳನ್ನು ಹೇಗೆ ಪದೆಪದೆ ಉಲ್ಲೇಖಿಸುತ್ತದೆಂಬುದನ್ನು ನೋಡಬೇಕು. ಮುಕ್ತಿಯಲ್ಲಿಯ ಮುಖ್ಯ ಕಲ್ಪನೆಗಳು ಎರಡು. (೧) ಶರೀರಬಂಧ ನಿವೃತ್ತಿ, ಕರ್ಮಬಂಧ ನಿವೃತ್ತಿ, ಪಾಪ ನಿವೃತ್ತಿ ಇವೇ ಮುಂತಾದವುಗಳು. (೨) ನೈಜಸುಖಾವಿರ್ಭಾವ, ಪರಮಾತ್ಮನನ್ನು ಪಡೆಯುವದರಿಂದುಂಟಾಗುವ ಸುಖ, ಅತ್ಯಂತ ಶಾಂತಮಯ ಸ್ಥಿತಿ. ಇವೆಲ್ಲವೂ ಸಮಾನಾರ್ಥಕ ಕಲ್ಪನೆಗಳು. ಇವು ಗೀತೆಯಲ್ಲಿ ನಮಗೆ ಪ್ರತಿಕ್ಷಣಕ್ಕೆ ದೊರೆಯುವವು. ಶ್ರೀಕೃಷ್ಣನು ಪ್ರತಿಕ್ಷಣಕ್ಕೆ ನಮ್ಮ ಆಯುಷ್ಯದ ಮುಖ್ಯ ಧ್ಯೇಯವು ಇದೇ ಇರಬೇಕೆಂಬುದನ್ನು ಹೇಳಲಿಕ್ಕೆ ಮರೆತಿಲ್ಲ. ಪದೆಪದೆ, ಅದರ ಎಚ್ಚರಿಕೆಯನ್ನು ಆತನು ನಮಗೆ ಮಾಡಿಕೊಟ್ಟಿರುವನು. ಸುಮಾರು ಒಂದು ನೂರು ಶ್ಲೋಕಗಳಲ್ಲಿ, ಗೀತೆಯ ಮುಖ್ಯಧ್ಯೇಯವು ಮೋಕ್ಷವೆಂಬುದನ್ನು ನಮ್ಮೆದುರಿಗೆ ಇಟ್ಟಿರುವನು! ಎಂದ ಬಳಿಕ, ಮೋಕ್ಷದ ಕಲ್ಪನೆಯು ಮಾನ್ಯವಿಲ್ಲದಿದ್ದವರಿಗೆ ಗೀತೆಯು ತಿಳಿಯುವುದು ಎಂತು?

(೫) ನಾವು ನೆನಪಿನಲ್ಲಿಡತಕ್ಕ ಕೊನೆಯ ಮಾತೆಂದರೆ-ಮೋಕ್ಷವನ್ನು ಪಡೆಯುವುದಕ್ಕೆ ಮನುಷ್ಯನು ಅನೇಕ ಜನ್ಮಗಳನ್ನು ತಾಳಬೇಕು. ಇದು ಮೇಲ್ಕಾಣಿಸಿದ ಸಿದ್ಧಾಂತಗಳಿಂದ ಹೊರಡುವ ಉಪಸಿದ್ಧಾಂತವು. ಪುನರ್ಜನ್ಮದಲ್ಲಿ ವಿಶ್ವಾಸವಿಲ್ಲದವರಿಗೆ ಗೀತೆಯು ತಿಳಿಯಲಾರದು. ಮುಕ್ತಿಯನ್ನು ಪಡೆಯುವವರೆಗೆ, ಜೀವನು ಒಂದು ಶರೀರದಿಂದ ಮತ್ತೊಂದು ಶರೀರಕ್ಕೆ ಅಲೆದಾಡಲಿಕ್ಕೇಬೇಕು. ಇದರಿಂದ, ಮನುಷ್ಯನಲ್ಲಿದ್ದ ಮರಣದ ಅಂಜಿಕೆಯು ಹಾರಿಹೋಗುತ್ತದೆ! ಜ್ಞಾನವನ್ನು ಗಳಿಸಿ ಮುಕ್ತಿಯನ್ನು ಪಡೆಯುವುದಕ್ಕೆ ಅನೇಕ ಜನ್ಮಗಳು ಬೇಕಾಗುವವು (೬—೪೫). ಗೀತೆಯ ಉಪದೇಶಕ್ಕೆ ಪ್ರಾರಂಭವಾಗಿರುವುದೇ ಈ ಪುನರ್ಜನ್ಮದ ಕಲ್ಪನೆಯಿಂದ. ಆದಕಾರಣ ಈ ತತ್ವವನ್ನು ನಾವು ನಂಬಲೇಬೇಕು.

ಮೇಲ್ಕಾಣಿಸಿದ ತತ್ವಗಳೆಲ್ಲವೂ ಗೀತೆಯ ತಳಹದಿಯ ತತ್ವಗಳು. ಅವುಗಳನ್ನು ಗೀತೆಯು ಸಿದ್ಧಪಡಿಸುವುದಕ್ಕೆ ಹೋಗಿಲ್ಲ–ಗೃಹೀತವಾಗಿ ತೆಗೆದುಕೊಂಡಿದೆ.

———

## ೬ನೆಯ ಪ್ರಕರಣ

# ಧರ್ಮಾಧರ್ಮವಿವೇಚನೆ

**ಧರ್ಮವೇ ಜಯವೆಂಬ ದಿವ್ಯಮಂತ್ರ । ಮರ್ಮವನು ತಿಳಿದು ಆಚರಿಸುವುದು ಶೀಘ್ರ ॥**

**—ಪುರಂದರದಾಸ**

ಈ ಬಗೆಯಾಗಿ, ನಾವು ಹಿಂದಿನ ಅಧ್ಯಾಯದಲ್ಲಿ, ಗೀತೆಯ ಮುಖ್ಯ ಸಂದೇಶದ ಮರ್ಮವನ್ನು ತಿಳಿದುಕೊಳ್ಳುವುದಕ್ಕೆ ಬೇಕಾಗುವ ಕೆಲವು ಮೂಲತತ್ವಗಳನ್ನು ಕುರಿತು ವಿವೇಚಿಸಿದ ಬಳಿಕ, ಮುಖ್ಯ ವಿಷಯದ ಕಡೆಗೆ ಎಂದರೆ ಗೀತೆಯ ಸಂದೇಶದ ಕಡೆಗೆ ಹೊರಳುವ.

ಗೀತೆಯ ಸಂದೇಶವಾವುದೆಂಬುದನ್ನು, ನಾವು ೩ನೆಯ ಪ್ರಕರಣ ದಲ್ಲಿ ಸಂಕ್ಷೇಪವಾಗಿ ಹೇಳಿರುವೆವಷ್ಟೆ. ಆ ಸಂದೇಶವು ಹೀಗೆ ಇದೆ— "ಸರ್ವವೂ ಭಗವದಧೀನವಾಗಿರುವುದರಿಂದ, ಸ್ವಹಿತವೃತ್ತಿಯಿಂದಲೂ ಭಕ್ತಿಯಿಂದಲೂ ಭಗವದಾರಾಧನೆ ಮಾಡುವುದೇ ಪರಮಧರ್ಮವು. ತದ್ವಿರುದ್ಧವಾದುದೆಲ್ಲವೂ ಅಧರ್ಮವು." ಇನ್ನು ಇದರೊಳಗೆ ಅಡಕ ವಾಗಿರುವ ಒಂದೊಂದೇ ಪ್ರಮೇಯವನ್ನು ವಿಸ್ತರಿಸಬೇಕಾಗಿರುವುದು. ಮುಂಚೆ ಈ ಪ್ರಕರಣದಲ್ಲಿ, ಧರ್ಮಾಧರ್ಮದ ವಿವೇಚನೆಯನ್ನು ಮಾಡಿ ರಮಧರ್ಮವೆಂದರೇನೆಂಬುದನ್ನು ನಿಶ್ಚಯಿಸುವ.

ಧರ್ಮವೆಂದರೇನು? ಧರ್ಮವೆಂದೊಡನೆಯೆ, ಕೆಲವರಿಗೆ ಬಲು ದೊಡ್ಡ ತಲೆಶೂಲಿ. ಅದೊಂದು ಅವರಿಗೆ ಬೆದರುಗುಂಡು. 'ನಮ್ಮ ಜನರು ಕುಳಿತಲ್ಲಿ, ನಿಂತಲ್ಲಿ, ಧರ್ಮವನ್ನು ತರುತ್ತಾರಲ್ಲ! ಧರ್ಮದ ಅರ್ಥವಾದರೋ, ಅದು ದೊಡ್ಡದೊಂದು ಗೂಢ. ಮನೆಮಠಗಳಲ್ಲಿ

ಗುಡಿಗುಂಡಾರಗಳಲ್ಲಿ, ಎಲ್ಲಿ ಹೋದಲ್ಲಿ ದೆವ್ವಸಂತೆ ಈ ಧರ್ಮವು ನಮ್ಮ ಬೆನ್ನು ಹತ್ತುವುದು! ಇದು ಬೇಡ; ಮೊದಲು, ಈ ಧರ್ಮವನ್ನು ಸಮೂಲವಾಗಿ ಛೇದಮಾಡಿದ ಹೊರತು ಗತ್ಯಂತರವಿಲ್ಲ: ಧರ್ಮದ ದಾಸ್ಯವನ್ನು ಮುಂಚೆ ಹಾರಿಸಬೇಕು.'—ಎಂದು ಮುಂತಾಗಿ ಒರಲುವ ಜನರು ಈಗ ಎಲ್ಲೆಲ್ಲಿಯೂ ಕಂಡುಬರುತ್ತಾರೆ. ಇಂಥವರ ತಲೆಯೊಳಗಿನ ಹುಳವು ಹೋಗದಿದ್ದರೆ, ಅವರಿಗೆ ಗೀತೆಯು ತಿಳಿಯಲಾರದು.

ಈ ಚಿಕ್ಕ ಪುಸ್ತಕದಲ್ಲಿ, ನಾವು ಧರ್ಮಾಧರ್ಮದ ಆಳವಾದ ವಿವೇಚನೆಯಲ್ಲಿ ಇಳಿಯಲಿಚ್ಛಿಸುವುದಿಲ್ಲ; ಅದು ಶಕ್ಯವಿಲ್ಲ. 'ಧರ್ಮ' ಶಬ್ದದ ಅರ್ಥವು ಗೂಢವಾದುದು, ವ್ಯಾಪಕವಾದುದು ಎಂಬುದನ್ನು ನಾವೂ ಒಪ್ಪುತ್ತೇವೆ. ಅದರಷ್ಟು ಅರ್ಥಗರ್ಭಿತವಾದ ಶಬ್ದವು ಬೇರೊಂದಿಲ್ಲ. ಹಾಗೆಯೇ, ನಾವು ಪ್ರತಿಯೊಂದಕ್ಕೂ ಧರ್ಮವನ್ನು ಮುಂದೆ ಚಾಚುತ್ತೇವೆಂಬುದೂ ಸುಳ್ಳಲ್ಲ. ಹಲ್ಲುತಿಕ್ಕಿಕೊಳ್ಳುವುದಕ್ಕೆ ಧರ್ಮ, ಶಾಲೆಗೆ ಹೋಗುವುದಕ್ಕೆ ಧರ್ಮ, ಹೊಸ ಅರವಿಯನ್ನು ಹಾಕಿಕೊಳ್ಳುವುದಕ್ಕೆ ಧರ್ಮ, ಹೊಸ ಜನಿವಾರ ಹಾಕಿಕೊಳ್ಳುವುದಕ್ಕೆ ಧರ್ಮ, ಹಳೆಯ ಜನಿವಾರವನ್ನು ಹರಿಯುವುದಕ್ಕೆ ಧರ್ಮ. ಅಹುದು. ಇದೆಲ್ಲವೂ ನಿಜ. ಆದರೆ ತುಸು ವಿಚಾರ ಮಾಡಿ ನೋಡಿದರೆ, ಇದರಲ್ಲಿ ಅಸ್ವಾಭಾವಿಕವಾದುದೇನೂ ಇಲ್ಲವು. ಧರ್ಮಶಬ್ದದ ಅರ್ಥವು ಗೊತ್ತಾಗದಿರುವುದೇ ಅವರ ತಪ್ಪುತಿಳವಳಿಕೆಗೆ ಮೂಲ. ಅವರ ಅಜ್ಞಾನವೇ ಅವರ ಮೋಹಕ್ಕೆ ಕಾರಣ.

ಧರ್ಮವೆಂದರೆ ಮನುಷ್ಯನನ್ನು ಎತ್ತಿಹಿಡಿಯುವ ಅಥವಾ ಉನ್ನತಿ ಮಾರ್ಗಕ್ಕೆ ಒಯ್ಯುವ ಒಂದು ಸಾಧನ.ಅದು ದೇವರ ನಿಯಮ ಅಥವಾ ಕಾಯದೆ. ನ್ಯೂಟನ್ನನ ಗುರುತ್ವಾಕರ್ಷಣದ (Law of Gravitation) ನಿಯಮವು ಹೇಗೆ ಒಂದು ಕಾಲಕ್ಕೆ ಸರ್ವವ್ಯಾಪಿಯಾಗಿತ್ತೋ ಹಾಗೆ ಈ ದೇವರ ನಿಯಮವಾದ (Law of God) ಧರ್ಮವು ಸರ್ವಕಾಲಕ್ಕೂ ಸರ್ವವ್ಯಾಪಿಯಾದ ಕಟ್ಟಳೆಯು. ಮನುಷ್ಯನ ಪ್ರತಿಯೊಂದು ಆಚರಣೆಯಲ್ಲಿ, ಮೋಕ್ಷದ ಕಡೆಗೆ ಉನ್ನತಿ ಮಾರ್ಗಕ್ಕೆ ಒಯ್ಯುವುದು

ಯಾವುದೋ ಅದು ಧರ್ಮವು, ಅವನತಿಯ ಮಾರ್ಗಕ್ಕೆ ಇಳಿಸುವುದು ಯಾವುದೋ ಅದು ಅಧರ್ಮವು-ಎಂದು ಸಾಮಾನ್ಯವಾಗಿ ಹೇಳಿದಂತಾಯಿತು. ಇದರಿಂದ ಅದರ ಸಂಬಂಧವು ಪ್ರತಿಯೊಂದು ಆಚರಣೆಯೊಡನೆ ಹೇಗೆ ಉಂಟಾಗುತ್ತದೆಂಬುದು ಗೊತ್ತಾಗುವುದು. ಆಚರಣೆಯೊಂದೊಡನೆ ಅದು ಧರ್ಮದ ಆಚರಣೆಯಾದರೂ ಆಗಿರುತ್ತದೆ; ಅಧರ್ಮದ ಆಚರಣೆಯಾದರೂ ಆಗಿರುತ್ತದೆ. ಆದಕಾರಣ, ಪ್ರತಿಯೊಂದು ವಿಷಯದಲ್ಲಿ ನಾವು ಧರ್ಮಾ-ಧರ್ಮದ ವಿಚಾರವನ್ನು ತಂದರೆತಪ್ಪೇನು? ಅಲ್ಲ-ಹಾಗೆ ತರುವುದು ಆವಶ್ಯಕವೇ ಆಗಿದೆ. ಹಲ್ಲುತಿಕ್ಕಿಕೊಳ್ಳುವ ಆಚರಣೆಯಲ್ಲಿಯೂ ಧರ್ಮವಿದೆ, ಅಧರ್ಮವಿದೆ. ಚಲೋ ರೀತಿಯಿಂದ ತಿಕ್ಕಿಕೊಳ್ಳುವುದು ಧರ್ಮವು. ಏಕೆಂದರೆ, ಅದು ಮನುಷ್ಯನನ್ನು ಉನ್ನತಿಪಥಕ್ಕೆ ಹಚ್ಚುತ್ತದೆ. ಕೆಟ್ಟ ರೀತಿಯಿಂದ ಹಲ್ಲುತಿಕ್ಕಿಕೊಳ್ಳುವುದು ಅಧರ್ಮವು. ಏಕೆಂದರೆ ಅದು ಮನುಷ್ಯನನ್ನು ಅಧೋಗತಿಗೆ ಒಯ್ಯುತ್ತದೆ.

ಹೀಗೆ ಧರ್ಮಶಬ್ದದ ಮೂಲ ಅರ್ಥವು ಸುಲಭವಿರುತ್ತದೆ. ಆ ಮೂಲ ಅರ್ಥವು ಬೀಜವಿದ್ದಂತೆ. ಮುಂದೆ ಅದಕ್ಕೇನೇ ಮೊಳಕೆ ಒಡೆದು, ಚಿಗುರು, ಹೂವು, ಕಾಯಿ, ಹಣ್ಣು ಮುಂತಾದವುಗಳು ಬಿಟ್ಟಿರುವುದರಿಂದ ಈ ಧರ್ಮವೃಕ್ಷವೂ ವಿಸ್ತಾರವನ್ನು ಹೊಂದಿದೆ. ಯಾವುದೊಂದು ಶಬ್ದಕ್ಕೆ ಹೀಗೆ ವ್ಯಾಪಕಾರ್ಥವು ಬರುವುದು ಆ ಮೂಲಶಬ್ದದಲ್ಲಿರುವ ವಿಲಕ್ಷಣವಾದ ಜೀವಶಕ್ತಿಯ ದ್ಯೋತಕವು. ಮತ್ತು ಹಾಗೆ ಆ ಶಬ್ದವನ್ನು ಅನೇಕ ಬಗೆಯಿಂದ ಹಿಗ್ಗಿಸುವುದು ಆ ಭಾಷೆಯ ಸುಸಂಸ್ಕೃತತ್ವದ ಅಥವಾ ವಿಕಾಸದ ಲಕ್ಷಣವು. ಆದಕಾರಣ, 'ಧರ್ಮ' ಶಬ್ದಕ್ಕೆ ನಾವು ಬೆದರುವ ಕಾರಣವಿಲ್ಲ. ಅದರ ಮೂಲ ಅರ್ಥವನ್ನು ಮನಸ್ಸಿನಲ್ಲಿ ಇಟ್ಟರೆ, ಅದರ ಉಪಯೋಗವನ್ನು ಹೇಗೆ ಮಾಡಿಕೊಳ್ಳಬೇಕೆಂಬುದು ಗೊತ್ತಾಗುತ್ತದೆ.

ಸುಖವನ್ನು—ಆದಷ್ಟು ಮಟ್ಟಿಗೆ ಹೆಚ್ಚಿಗೆ ಶಾಶ್ವತ ಸುಖವನ್ನು ದೊರಕಿಸುವುದೇ ಮನುಷ್ಯನ ಹಂಬಲ. ಆ ಶಾಶ್ವತ ಸುಖಕ್ಕೇ ಮುಕ್ತಿಯೆಂದು ಹೆಸರು. ಅದೇ ಆತನಿಗೆ ಎಲ್ಲಕ್ಕೂ ಇಷ್ಟವಾದ ಪದಾರ್ಥ. ದುಃಖವು ಎಲ್ಲರಿಗೂ ಅನಿಷ್ಟವಾದ ಪದಾರ್ಥ. ಅದನ್ನು ಆದಷ್ಟುಮಟ್ಟಿಗೆ

ತಪ್ಪಿಸುವುದಕ್ಕೆ ಮನುಷ್ಯನ ಪ್ರಯತ್ನ. ಮನುಷ್ಯನಿಗೆ ಎಲ್ಲಕ್ಕಿಂತಲೂ ಹೆಚ್ಚಿಗೆ ಪ್ರಿಯವಾಗಿರುವ ಈ ಇಷ್ಟಪ್ರಾಪ್ತಿಯ ಸಾಧನವೇ ಧರ್ಮ, ಅನಿಷ್ಟ ಪ್ರಾಪ್ತಿಯ ಸಾಧನವೇ ಅಧರ್ಮ. ಸಾರಾಂಶ, ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಮೋಕ್ಷದಲ್ಲಿಯೂ ಸುಖವನ್ನು ದೊರಕಿಸುವ ಸಾಧನವೇ ಧರ್ಮ, ದುಃಖಕ್ಕೆ ಕಾರಣವಾಗುವುದೇ ಅಧರ್ಮ. ಧರ್ಮಕ್ಕೇನೇ ಪುಣ್ಯ, ಸುಕೃತವೆಂದೂ ಅಧರ್ಮಕ್ಕೇನೇ ಪಾಪ, ದುಷ್ಕೃತವೆಂದೂ ಹೆಸರುಗಳು.

**ಮನವ ಶೋಧಿಸಬೇಕೋ ನಿಚ್ಚ । ದಿನದಿನದಿ ಮಾಡುವ ಪಾಪಪುಣ್ಯಗಳ ವೆಚ್ಚ ॥**
**ಧರ್ಮ ಅಧರ್ಮವ ವಿಂಗಡಿಸಿ । ಅ । ಧರ್ಮದ ನರಗಳ ಬೇರ ಕತ್ತರಿಸಿ ॥**
**ನಿರ್ಮಲಾಚಾರ ಬೆರಸಿ । ವರ ಬೊಮ್ಮ ಮೂರುತಿ ಪಾದಕಮಲವ ಭಜಿಸಿ ॥**

**—ಪುರಂದರದಾಸ**

ಈ ಧರ್ಮಾಧರ್ಮಗಳನ್ನು ವಿಂಗಡಿಸುವ ಬಗೆ ಏನು? ಅದಕ್ಕೆ ಒರೆಗಲ್ಲು ಯಾವುದು? ಧರ್ಮಗಳು ಯಾವುವು, ಅಧರ್ಮಗಳು ಯಾವುವು, ಅವುಗಳಲ್ಲಿಯೂ ಎಲ್ಲಕ್ಕೂ ಮುಖ್ಯವಾದ ಧರ್ಮವು ಎಂದರೆ ಪರಮಧರ್ಮವು ಆವುದು ಎಂಬುದನ್ನು ನಾವು ಇನ್ನು ತಿಳಿದುಕೊಳ್ಳಬೇಕಾಗಿದೆ. ಧರ್ಮವು ಗೀತೆಯ ಮುಖ್ಯ ವಿಷಯವು. ಗೀತೆಯು ಧರ್ಮಶಾಸ್ತ್ರವು. ಧರ್ಮವು ಯಾವುದು ಅಧರ್ಮವು ಯಾವುದು ಎಂಬುದನ್ನು ತಿಳಿಯದೆ ಅರ್ಜುನನು 'ಧರ್ಮಸಮ್ಮೂಢಚೇತ'ನಾದುದೇ (೨.೭) ಗೀತೆಯ ಉಪದೇಶಕ್ಕೆ ಮೂಲವು. ತಾನು ಯುದ್ಧದಲ್ಲಿ ಬಾಂಧವಾದಿಗಳನ್ನು ಕೊಲ್ಲುವುದರಿಂದ, ತನಗೆ ಅಧರ್ಮವು ಎಂದರೆ ಪಾಪವು ತಟ್ಟುತ್ತದೆ; ಏಕೆಂದರೆ ಅದರಿಂದ ಜಾತಿಧರ್ಮ, ಕುಲಧರ್ಮ, ವರ್ಣಾಶ್ರಮಧರ್ಮಗಳೆಲ್ಲವೂ ಮುಳುಗಿ ಹೋಗುತ್ತವೆ ಎಂಬುದು ಅರ್ಜುನನ ಅಂಜಿಕೆ. ಯೋಗ್ಯರೀತಿಯಿಂದ ಯುದ್ಧಮಾಡಿದರೆ ಅದು ಅಧರ್ಮವಲ್ಲ, ಧರ್ಮವು ಎಂದು ಹೇಳುವುದೇ ಗೀತೆಯ ಉಪದೇಶದ ಸಾರ. ಆ ಯೋಗ್ಯರೀತಿ ಯಾವುದೆಂಬುದನ್ನು ತಿಳಿಸಿ ಹೇಳುವುದೇ ಶ್ರೀಕೃಷ್ಣನ ಗುರಿ. ಅರ್ಜುನನ ಶಂಕೆಯು ಕೇವಲ ಯುದ್ಧಕ್ಕೆ ಮಾತ್ರವೇ ಸಂಬಂಧಿಸಿತ್ತು. ಯುದ್ಧವನ್ನು ಯಾವ ರೀತಿಯಲ್ಲಿ ಮಾಡಿದರೆ ಧರ್ಮವಾಗುತ್ತದೆಂಬುದನ್ನು

ತಿಳಿದುಕೊಳ್ಳುವುದಷ್ಟೇ ಆತನ ಉದ್ದೇಶವಾಗಿತ್ತು. ಆದರೆ, ಶ್ರೀಕೃಷ್ಣನು ಈ ಸಂದರ್ಭದ ಲಾಭವನ್ನು ತೆಗೆದುಕೊಂಡು, ಧರ್ಮರಹಸ್ಯವನ್ನೇ ಅರ್ಜುನನಿಗೆ ಉಪದೇಶಿಸಿರುವನು. ಇದಕ್ಕೆ ಕಾರಣಗಳು ಎರಡು. (೧) ಅರ್ಜುನನನ್ನು ನಿಮಿತ್ತ ಮಾಡಿಕೊಂಡು ಲೋಕಕ್ಕೆ ಧರ್ಮೋಪದೇಶವನ್ನು ಮಾಡುವುದು ಶ್ರೀಕೃಷ್ಣನ ಉದ್ದೇಶವಾಗಿತ್ತು. ಆದಕಾರಣ, ಧರ್ಮದ ಏಕದೇಶೀಯವಾದ ಯುದ್ಧದ ವಿಷಯದಲ್ಲಿ ಮಾತ್ರವೇ ಅರ್ಜುನನು ಶಂಕೆಯನ್ನು ಎತ್ತಿದ್ದರೂ, ಶ್ರೀಕೃಷ್ಣನು ಸಮಗ್ರ ಧರ್ಮಾಧರ್ಮದ ರಹಸ್ಯವನ್ನು ವಿವೇಚಿಸಿರುವನು. (೨) ಅಲ್ಲದೆ, ಧರ್ಮಾಧರ್ಮವನ್ನು ನಿಶ್ಚಯಿಸುವ ಒರೆಗಲ್ಲನ್ನು ಹೇಳಿಬಿಡುವುದರಿಂದ, ಯುದ್ಧವು ಹೇಗೆ ಧರ್ಮಸ್ವರೂಪವನ್ನು ಹೊಂದುವುದೆಂಬುದನ್ನು, ಆ ಬಳಿಕ, ಬೇರೆ ಹೇಳುವ ಅಗತ್ಯವೇ ಉಳಿಯುವುದಿಲ್ಲ. ಏಕೆಂದರೆ, ಪ್ರತಿಯೊಂದು ಆಚರಣೆಗೆ ಮೂಲಭೂತವಾದ ತತ್ತ್ವವನ್ನು ಹೇಳಿಬಿಟ್ಟರೆ ತೀರಿತು, ಪ್ರತ್ಯೇಕವಾಗಿ ಅದನ್ನು ಯುದ್ಧಕರ್ಮಕ್ಕೆ ಅನ್ವಯಿಸಿಕೊಳ್ಳುವುದಕ್ಕೆ ಶ್ರಮ ಹಿಡಿಯುವುದಿಲ್ಲ. ಆದಕಾರಣ, ಗೀತೆಯು ಯುದ್ಧವಿಷಯಕ ಪ್ರಶ್ನೆಯಿಂದ ಪ್ರಾರಂಭವಾಗಿದ್ದರೂ ಅದರಲ್ಲಿ, ಯುದ್ಧದ ಧರ್ಮಾಧರ್ಮದ ನಿರ್ಣಯವು ವಿಶೇಷವಾಗಿರದೆ, ಪ್ರತಿಯೊಂದು ಆಚರಣೆಯ ಧರ್ಮಾಧರ್ಮಸ್ವರೂಪದ ನಿರ್ಣಯವೇ ವಿಶೇಷವಾಗಿರುತ್ತದೆ. ಧರ್ಮಾಧರ್ಮದ ಮುಖ್ಯ ಮೂಲತತ್ತ್ವವನ್ನು ವಿವರಿಸಿ ಹೇಳಿ, ನಡುನಡುವೆ, "ಆದಕಾರಣ, ಹೀಗೆ ಯುದ್ಧಮಾಡು" ಎಂದು ಶ್ರೀಕೃಷ್ಣನು ಹೇಳುತ್ತ ಬಂದಿರುವನು. ಇರಲಿ.

ಗೀತೆಯು ಹೇಳುವುದೇನೆಂದರೆ-ಜಗತ್ತಿನಲ್ಲಿ ಮನುಷ್ಯನ ಮುಂದೆ ಎರಡು ಮಾರ್ಗಗಳಿರುತ್ತವೆ; ಒಂದು ಕಾಮಮಾರ್ಗ, ಮತ್ತೊಂದು ಧರ್ಮಮಾರ್ಗ. ಕಾಮಮಾರ್ಗವೆಂದರೆ ಮನುಷ್ಯನ ಮನೋವಿಕಾರಗಳಿಗನುಸರಿಸಿ ನಡೆಯುವ ಮಾರ್ಗವೆಂದೂ ಧರ್ಮಮಾರ್ಗವೆಂದರೆ ಮನುಷ್ಯನು ತನ್ನ ಆತ್ಮಿಕ ಸ್ವರೂಪವನ್ನನುಸರಿಸಿ ನಡೆಯುವ ಮಾರ್ಗವೆಂದೂ ಸ್ಥೂಲವಾಗಿ ಹೇಳಬಹುದು. ಕಾಮಮಾರ್ಗವು ಸಕೃದ್ದರ್ಶನಕ್ಕೆ ಬಲು ಚಂದ ಕಾಣಿಸುವ ಮಾರ್ಗವು, ಪ್ರಿಯವಾಗಿ ತೋರುವ

ಮಾರ್ಗವು, ಸ್ವೇಚ್ಛಾಚಾರಕ್ಕೆ ಅನುವು ಕೊಡುವ ಮಾರ್ಗವು, ತನ್ನ ಮನೋವಿಕಾರಗಳಿಗೆ ಅನುಗುಣವಾದ ಮಾರ್ಗವು, ಇಂದ್ರಿಯಗಳಿಗೆ ವಶವಾಗಿರುವ ಮಾರ್ಗವು. ಈ ಮಾರ್ಗದ ಕಡೆಗೆ ಇಂದ್ರಿಯಗಳನ್ನು ಎಳೆಯುವುದಕ್ಕೆ ಮನಸ್ಸು ತಹತಹ ಪಡುತ್ತದೆ. ಆದರೆ, ಈ ಮಾರ್ಗದಲ್ಲಿ ಹೋಗುವುದರಿಂದ, ಮನುಷ್ಯನಿಗೆ ನಿಜವಾದ ಸುಖವು ಸಿಕ್ಕುವುದಿಲ್ಲ. ಆ ಸುಖವು ಮುಂಚೆ ಅಮೃತದಂತಿದ್ದರೂ ಮುಂದೆ ವಿಷಮಯವಾಗಿ ಪರಿಣಮಿಸುತ್ತದೆ (೧೮.೩೭). ಆದಕಾರಣ, ಮನುಷ್ಯನನ್ನು ಆ ಮಾರ್ಗದ ಕಡೆಗೆ ಹೋಗಗೊಡದೆ, ಮತ್ತೊಂದು ದಾರಿಗೆ ಎಂದರೆ ಧರ್ಮಮಾರ್ಗಕ್ಕೆ ಹಚ್ಚುವುದು ಗೀತೆಯ ಗುರಿ. ಈ ಧರ್ಮಮಾರ್ಗಕ್ಕೆ ಹತ್ತಬೇಕಾದರೆ, ಮನುಷ್ಯನು ಇಂದ್ರಿಯಗಳನ್ನೂ ಮನಸ್ಸನ್ನೂ ಜಯಿಸಬೇಕು. ಇಲ್ಲಿ, ಇಂದ್ರಿಯಗಳೆಂಬ ಕುದುರೆಗಳಿಗೆ ಲಗಾಮು ಹಚ್ಚಬೇಕಾಗುತ್ತದೆ, ಮೇಲಿಂದಮೇಲೆ ಲಗಾಮನ್ನು ಜಗ್ಗಬೇಕಾಗುತ್ತದೆ. ಇಲ್ಲಿ, ಸ್ವಾತಂತ್ರ್ಯವು ಕಡಿಮೆ. ಮನುಷ್ಯನು ವಿಧಿಬದ್ಧನಾಗಬೇಕಾಗುತ್ತದೆ, ಶಾಸ್ತ್ರನಿಯತನಾಗಬೇಕಾಗುತ್ತದೆ, ಅಥವಾ ಸ್ವೇಚ್ಛಾನಿಯತನಾಗಬೇಕಾಗುತ್ತದೆ. ಇದು ಉಚ್ಛೃಂಖಲವಾದ ಮನೋವಿಕಾರಗಳನ್ನು ಅನುಸರಿಸಿ ಹೋಗುವ ಕಾಮಚಾರಿ ಮಾರ್ಗವಲ್ಲ. ಲಗಾಮಿಲ್ಲದ ಕುದುರೆಗಳಂತೆ ಭರದಿಂದೋಡುವ ಭೋಗಮಾರ್ಗವಿದಲ್ಲ. ಕಾಮಚಾರಿಗಳು ಸದಾ ಸ್ವೇಚ್ಛಾಚಾರಿಗಳೂ ಅನಾಚಾರಿಗಳೂ ಆಗಿರುವರು. ಅವರಿಗೆ ಮುಂದೆ ಮುಗ್ಗರಿಸುವ ಅಂಜಿಕೆಯಿಲ್ಲ, ತೆಗ್ಗುದಿನ್ನೆಗಳ ಪರಿವೆಯಿಲ್ಲ. ಆದರೆ, ಧರ್ಮವೆಂಬುದು ಒಂದು ಬಂಧನ, ಒಂದು ಕಟ್ಟು, ಒಂದು ಕಟ್ಟಳೆ. ಕಾಮಮಾರ್ಗವು ಕಾಲುಬಿಚ್ಚಿದ ಮಾರ್ಗವು, ಧರ್ಮಮಾರ್ಗವು ಕಾಲುಕಟ್ಟಿದ ಮಾರ್ಗವು.

ಗೀತೆಯಲ್ಲಿ ಈ ಕಾಮಮಾರ್ಗದವರನ್ನು ಪರಿಪರಿಯಾಗಿ ನಿಂದಿಸಿದೆ. ಅವರಿಗೆ ಕಾಮಾತ್ಮರು (೨.೪೩), ಭೋಗೈಶ್ವರ್ಯಪ್ರಸಕ್ತರು (೨.೪೪), ಇಂದ್ರಿಯಾರಾಮಿಗಳು (೩.೧೬), ಕಾಮಕಾಮಿಗಳು (೨.೭೦), ಕಾಮಕಾಮರು (೨.೭೧), ಕಾಮಕ್ರೋಧಪರಾಯಣರು (೧೬.೧೨), ಕಾಮೋಪಭೋಗಪರಮರು (೧೬.೧೧), ಭೋಗಿಗಳು (೧೬.೧೪), ಕಾಮಭೋಗ

ಪ್ರಸಕ್ತರು (೧೬.೧೬), ಧನಮಾನ ಮದಾನ್ವಿತರು (೧೬.೧೭), ಅನಾತ್ಮರು (೬.೬), ಅಸಂಯುತಾತ್ಮರು (೬.೩೬), ವಿಮೂಢಾತ್ಮರು (೩.೬). ಅಹಂಕಾರವಿಮೂಢಾತ್ಮರು (೩.೨೭), ಆಸುರೀಪ್ರಕೃತಿಯುಳ್ಳವರು (೯.೧೨) ಎಂದು ಮುಂತಾದ ನಿಂದಾವ್ಯಂಜಕ ಶಬ್ದಗಳಿಂದ ಅವರನ್ನು ಉಲ್ಲೇಖಿಸಿದೆ. ಇದಕ್ಕೆ ವಿರುದ್ಧವಾಗಿ, ಮಹಾತ್ಮರು (೭.೧೯), ಧರ್ಮಾತ್ಮರು (೯.೩೧), ದೈವೀಸಂಪತ್ತುಳ್ಳವರು (೧೬.೫), ದೈವೀಪ್ರಕೃತಿಯುಳ್ಳವರು (೯.೧೩), ಪ್ರಸನ್ನಚೇತರು (೨.೬೫), ಸ್ಥಿತಪ್ರಜ್ಞರು (೨.೫೪), ಸ್ಥಿತಧೀಗಳು (೨.೫೪), ಯೋಗಾರೂಢರು (೬.೩), ಆತ್ಮತೃಪ್ತರು (೩.೧೭), ವೀತರಾಗಭಯಕ್ರೋಧರು (೪.೧೦), ಯತಚಿತ್ತಾತ್ಮರು (೪.೨೧), ಯದೃಚ್ಛಾಲಾಭಸಂತುಷ್ಟರು (೪.೨೨), ದ್ವಂದ್ವಾತೀತರು (೪.೨೨), ವಿಜಿತಾತ್ಮರು (೫.೭), ಜಿತೇಂದ್ರಿಯರು (೫.೭), ಸರ್ವಭೂತಾತ್ಮಭೂತಾತ್ಮರು (೫.೭), ಸ್ಥಿರಬುದ್ಧಿಗಳು (೫.೨೦), ಅಸಮ್ಮೂಢರು (೫.೨೦), ಅಂತರಾರಾಮಿಗಳು (೫.೨೪), ಯತಾತ್ಮರು (೫.೨೫). ಯತಚೇತಸರು (೫.೨೬), ವಿಗತೇಚ್ಛಾಭಯಕ್ರೋಧರು (೩.೨೭), ಜಿತಾತ್ಮರು (೬.೭), ಪ್ರಶಾಂತಾತ್ಮರು (೬.೧೪), ನಿಯತಮಾನಸರು (೬.೧೫) ಯತಚಿತ್ತರು (೬.೧೯), ಯುಕ್ತಾತ್ಮರು (೭.೧೮), ಸಂನ್ಯಾಸಯೋಗಯುಕ್ತಾತ್ಮರು (೯.೨೮) ಇವೇ ಮುಂತಾದ ಸ್ತುತಿಪರವಾದ ಶಬ್ದಗಳಿಂದ ಸಂಬೋಧಿಸಿರುತ್ತದೆ. ಕಾಮಮಾರ್ಗವನ್ನು ಬಿಟ್ಟು ಧರ್ಮಮಾರ್ಗವನ್ನು ಹಿಡಿಯುವುದು ಮೊದಲನೆಯ ಹೆಜ್ಜೆ. ಮನೋವಿಕಾರಗಳು ಆತನನ್ನು ಒಂದೇಸಮನೆ ತಗ್ಗಿಗೆ ಎಳೆಯುತ್ತವೆ. ಆದಕಾರಣ ಇಂದ್ರಿಯಜಯಮನೋಜಯಗಳನ್ನು ಸಾಧಿಸಿಕೊಳ್ಳುವುದೇ ಎಲ್ಲಕ್ಕೂ ಮೊದಲಿನ ಕೆಲಸ. ಇದು ಒಮ್ಮೆಲೆ ಯಾರಿಗೂ ಸಾಧ್ಯವಾದುದಲ್ಲ. ಸತತವಾದ ಅಭ್ಯಾಸದಿಂದಲೂ ವೈರಾಗ್ಯದಿಂದಲೂ ಮಾತ್ರವೇ ಸಾಧ್ಯವು. (೬.೩೫). ಮನುಷ್ಯನೆಂದರೆ ಎರಡು ಕತ್ತರಿಗಳಲ್ಲಿ ಸಿಕ್ಕು ತೊಳಲಾಡುವ ಪ್ರಾಣಿಯು. ಅತ್ತ, ಕಾಮವು ಆತನನ್ನು ಭರ್ರನೆ ಎಳೆದೊಯ್ಯುತ್ತದೆ. ಇತ್ತ, ಆತನು ಧರ್ಮದ ಕಡೆಗೆ ವಿಶ್ವಪ್ರಯತ್ನದಿಂದ ತಿರುಗಲು ಪ್ರಯತ್ನಿಸುತ್ತಿರುತ್ತಾನೆ. ಈ ಕಾದಾಟವೂ ಧರ್ಮವೇ. ಈ ಧರ್ಮದ ಸ್ವಲ್ಪೇ

ಆಚರಣೆಯು ಕೂಡ, ಮನುಷ್ಯನನ್ನು ಮಹಾಗಂಡಾಂತರದಿಂದ ಪಾರು ಮಾಡುತ್ತದೆ (೨ ೪೦). ಕಾದಾಟವು ನಿಂತರೆ ಮಾತ್ರ ಮನುಷ್ಯನು ಸತ್ತನೆಂದೇ ತಿಳಿಯಬೇಕು. ಕಾದಾಟವೇ ಜೀವನವು, ಜೀವನವೇ ಕಾದಾಟವು.

ಹೀಗೆ ಪ್ರಯತ್ನದಿಂದ, ಧರ್ಮಮಾರ್ಗವನ್ನು ಹಿಡಿಯುವುದಕ್ಕೆ ಮೊದಲಿಗೆ ಮನಸ್ಸಿನಲ್ಲಿ ಬರಬಹುದಾದ ಸುಲಭವಾದ ಯುಕ್ತಿಯೆಂದರೆ, ಕಾಮಗಳನ್ನು ಅಪೂಟವಾಗಿ ಬಿಡುವುದು; ಅವುಗಳಿಂದ ತಪ್ಪಿಸಿಕೊಂಡು ಓಡುವುದು; ಅದಕ್ಕೋಸ್ಕರ ಸಂಸಾರವನ್ನು ತೊರೆದು ಸಂನ್ಯಾಸವನ್ನು ಸ್ವೀಕರಿಸುವುದು. ಆದರೆ, ಈ ಯುಕ್ತಿಯು ಸುಲಭವಾಗಿ ತೋರಿದರೂ ನಿಜವಾದ ಯುಕ್ತಿಯಲ್ಲ. ಅದನ್ನು ಗೀತೆಯು ಬೋಧಿಸುವುದಿಲ್ಲ. ಗೀತೆಯು ಹೇಡಿತನವನ್ನು ಬೋಧಿಸುವ ಗ್ರಂಥವಲ್ಲ. ಅದು ಸಂಸಾರವನ್ನು ತಪ್ಪಿಸುವುಕ್ಕೆ ಹೇಳುವುದಿಲ್ಲ, ಎದುರಿಸುವುದಕ್ಕೆ ಹೇಳುತ್ತದೆ. ಕಾಮಗಳನ್ನು ಕೊಲ್ಲಲಿಕ್ಕೆ ಹೇಳುವುದಿಲ್ಲ, ಕಾಮಗಳಿಗೆ ಮೂಗದಾಣವನ್ನು ಹಾಕಲಿಕ್ಕೆ ಹೇಳುತ್ತದೆ. ಭೋಗವನ್ನು ಬಿಡಲು ಹೇಳುವುದಿಲ್ಲ, ಭೋಗಕ್ಕೆ ಧರ್ಮದ ಸ್ವರೂಪವನ್ನು ಕೊಡಲು ಬೋಧಿಸುತ್ತದೆ. ಮುಕ್ತಿಮಾರ್ಗಕ್ಕೆ ಭೋಗವು ಅಡ್ಡಬಾರದಂತೆ ಅದನ್ನು ಉಪಭೋಗಿಸುವ ಯುಕ್ತಿಯನ್ನು ಹೇಳುವುದೇ ಗೀತೆಯ ಕೌಶಲ್ಯವು. ಈ ಮಾತು ಗೀತೆಯ ಅನೇಕ ಶ್ಲೋಕಗಳಿಂದ ಸ್ಪಷ್ಟವಾಗುತ್ತದೆ. ಆಮೆಯು ತನ್ನ ಅವಯವಗಳನ್ನು ಬೇಕಾದಾಗ ಎಳೆದುಕೊಳ್ಳುವ ಶಕ್ತಿಯುಳ್ಳದ್ದಾಗಿರುವಂತೆ ಮನುಷ್ಯನು ತನ್ನ ಇಂದ್ರಿಯಗಳನ್ನು ಸೆಳೆದುಕೊಳ್ಳುವುದಕ್ಕೆ ಕಲಿಯಬೇಕೆಂದೂ (೨.೫೮), ಇಂದ್ರಿಯಗಳು ಯಾವಾತನ ವಶದಲ್ಲಿ ಇರುವವೋ ಆತನ ಬುದ್ಧಿಯೇ ಸ್ಥಿರಬುದ್ಧಿಯೆಂದೂ (೨.೬೧), ಹೀಗೆ ಆತ್ಮವಶವಾದ ಮನಸ್ಸುಳ್ಳವನೇ ಮನಃಪ್ರಸಾದವನ್ನು ಹೊಂದುತ್ತಾನೆಂದೂ (೨.೬೪) ಅದು ಉಪದೇಶಿಸುತ್ತದೆ. ತುಂಬಿ ತುಳುಕುತ್ತಲೂ ಅಚಲವಾಗಿಯೂ ನಿಂತಿರುವ ಸಮುದ್ರವನ್ನು ನದಿಗಳು ಪ್ರವೇಶಿಸುವಂತೆ ಸರ್ವಕಾಮಗಳು ಯಾವನನ್ನು ಪ್ರವೇಶಿಸುತ್ತವೆಯೋ ಅಂಥವನೇ ಮುಕ್ತಿಯನ್ನು ಹೊಂದುತ್ತಾನೆ. (೨.೭೦) ಎಂದರೆ ಆತನು ಎಲ್ಲ ವಿಷಯ

ಗಳನ್ನನುಭೋಗಿಸಿದರೂ, ಚಲಚಿತ್ತನಾಗುವುದಿಲ್ಲವೆಂದು ಅರ್ಥ.''ಯಾವ ಮನುಷ್ಯನು ನಿಸ್ಪೃಹನಾಗಿಯೂ ಅಹಂಕಾರ–ಮಮತ್ವಗಳನ್ನು ಬಿಟ್ಟು ಕೊಟ್ಟು, ಯಾವತ್ತು ಕಾಮಗಳನ್ನು ಅನುಭವಿಸುತ್ತಾನೋ ಆತನು ಮುಕ್ತಿಯನ್ನು ಹೊಂದುತ್ತಾನೆ.'' (೨.೭೧) ಎಂಬುದಾಗಿ, ಕಾಮ ಗಳನ್ನು ಬಿಡದೆ, ಅವುಗಳಿಗೆ ಧರ್ಮಸ್ವರೂಪವನ್ನು ಕೊಡುವ ಬಗೆ ಯನ್ನು ಹೇಳುತ್ತದೆ. ಈ ದೇಹದಲ್ಲಿ ಇರುವಾಗ ಕೂಡ,ಕಾಮಕ್ರೋಧಾ ದಿಗಳ ವೇಗವನ್ನು ತಡೆದು ಹಿಡಿಯುವುದು ಶಕ್ಯವಿದೆ. ಅಂಥವನೇ ಯೋಗಿಯು (೫.೨೩). ಹಾಗೆ ಮಾಡದೆ, ಯಾವ ಮೂಢನು ಕರ್ಮೇಂ ದ್ರಿಯಗಳನ್ನು ಬಿಗಿಹಿಡಿದು, ಮನಸ್ಸಿನಿಂದ ವಿಷಯಗಳನ್ನು ನೆನಿಸು ತ್ತಾನೋ ಆತನು ಡಾಂಭಿಕನು. (೩.೭). ಸಾರಾಂಶ, ಕಾಮಕ್ರೋ ಧಾದಿಗಳನ್ನು ಸಂಪೂರ್ಣವಾಗಿ ತ್ಯಜಿಸಲಿಕ್ಕೆ ಹೇಳುವುದು ಗೀತೆಯ ಉದ್ದೇಶವಲ್ಲ, ಅವುಗಳನ್ನು ಯೋಗ್ಯಮಾರ್ಗಕ್ಕೆ ಹಚ್ಚುವುದು ಗೀತೆಯ ಉದ್ದೇಶವು.

ಇಲ್ಲಿ ನೆನಪಿನಲ್ಲಿಡತಕ್ಕ ಮತ್ತೊಂದು ಮಾತೆಂದರೆ–ಧರ್ಮಾಧರ್ಮ ಗಳು ಮನುಷ್ಯನಿಗೆ; ಪಶುಪಕ್ಷಿಗಳಿಗೆ ಅಥವಾ ಜಡಕ್ಕಲ್ಲವೆಂಬುದು. ಪಶುಗಳು ಅನಾಚಾರಿಗಳು, ಸ್ವೇಚ್ಛಾಚಾರಿಗಳು. ಅವಕ್ಕೆ ದೇವರಿಲ್ಲ, ಧರ್ಮವಿಲ್ಲ. ಹಾಗೆಯೇ, ಮನುಷ್ಯನು ಪಶುವೃತ್ತಿಯನ್ನವಲಂಬಿಸಿ ಸ್ವೇಚ್ಛಾಚಾರಿಯೂ ಅನಾಚಾರಿಯೂ ಆದರೆ ಆತನಿಗೂ ದೇವರಿಲ್ಲ, ಧರ್ಮವಿಲ್ಲ. ಅದು ತಾಮಸ ಸ್ವಾತಂತ್ರ್ಯವು, ನಿಜವಾದ ಸ್ವಾತಂತ್ರ್ಯ ವಲ್ಲ. ಧರ್ಮಾಧರ್ಮಗಳು ಸಾಧಕರಿಗೆ ಮಾತ್ರ. ಬೆಕ್ಕುನಾಯಿಗಳನ್ನು ಮುಟ್ಟಿದರೆ ಮೈಲಿಗೆಯಿಲ್ಲವಂತೆ, ಮನುಷ್ಯನು ಮುಟ್ಟಿದರೆ ಮೈಲಿಗೆ ಯಂತೆ ಎಂಬುದಾಗಿ ವಾದಿಸುವವರು ಈ ತತ್ವವನ್ನು ಮರೆಯುತ್ತಾರೆ. ಸಾಧಕರಿಗಿಂತ ಕೆಳಗಿನ ತರಗತಿಯವರಿಗೆ ಧರ್ಮಾಧರ್ಮಗಳ ಉಪಯೋ ಗವಿಲ್ಲ, ಸಾಧಕರಿಗಿಂತ ಹೆಚ್ಚಿನ ತರಗತಿಯವರು ಎಂದರೆ ಸಿದ್ಧರು, ಯೋಗಾರೂಢರು, ಅಥವಾ ಸ್ಥಿತಪ್ರಜ್ಞರಾದವರು ಸ್ವೇಚ್ಛಾನಿಯತರಾ ಗಿರುವುದರಿಂದ ಅವರಿಗೂ ಧರ್ಮಾಧರ್ಮದ ಬಿಗಿಯಾದ ಕಟ್ಟುಗಳ ಆವಶ್ಯಕತೆಯು ಅಷ್ಟೊಂದಿಲ್ಲ. ಧರ್ಮಾಧರ್ಮಗಳು, ಶಾಸ್ತ್ರಾಶಾಸ್ತ್ರ

ಗಳು ನಡುವಿನ ತ್ರಿಶಂಕುಗಳಿಗೆ, ಸಾಧಕರಿಗೆ, ಸಾಧನಮಾರ್ಗವನ್ನು ಹಿಡಿಯಬಿಚ್ಛಿಸುವವರಿಗೆ. ಅಂಥವರೇ ಬಹಳ ಮಂದಿ. ಇರಲಿ.

ಮನುಷ್ಯನು ವೈರಾಗ್ಯಬುದ್ಧಿಯನ್ನು ತಾಳಿ, ಕಾಮಮಾರ್ಗದಿಂದ ತಪ್ಪಿಸಿಕೊಂಡು, ಧರ್ಮಮಾರ್ಗಕ್ಕೆ ಹತ್ತಿದ ಬಳಿಕ, ಮುಂದೆ ಎರಡು ಟಿಸಿಲುಗಳೊಡೆದಿರುತ್ತವೆ. ಒಂದು ಸ್ವರ್ಗಪ್ರದಮಾರ್ಗವು, ಮತ್ತೊಂದು ಮೋಕ್ಷಪ್ರದ ಮಾರ್ಗವು. ಸ್ವರ್ಗಪ್ರದವಾದ ಮಾರ್ಗವು ಕೆಟ್ಟದೇನೂ ಅಲ್ಲ. ಆದರೆ, ಅಲ್ಲಿ ದೊರೆಯುವ ಸುಖವು ಶಾಶ್ವತವಲ್ಲ. ಅದೂ ಪುಣ್ಯಮಾರ್ಗವೇನೋ ಅಹುದು. ಆದರೆ, ಈ ಮಾರ್ಗದಲ್ಲಿ, ಪುಣ್ಯತೀರಿದ ಬಳಿಕ, ಮನುಷ್ಯನು ಮತ್ತೆ ಭೂಲೋಕಕ್ಕೆ ಬೀಳುತ್ತಾನೆ (೯.೨೧). ಗೀತೆಯಲ್ಲಿ ಈ ಮಾರ್ಗದ ವರ್ಣನೆಯೂ ಅಲ್ಲಲ್ಲಿ ಬಂದಿದೆ. ಇಂಥವರನ್ನು ರಾಜಸವರ್ಗದಲ್ಲಿ ಸೇರಿಸಬಹುದು. ಕಾಮ್ಯಕರ್ಮಿಗಳು ಇವರು (೨.೪೩). ಸ್ವರ್ಗವನ್ನು ಸಂಪಾದಿಸುವುದೇ ಹೆಚ್ಚಿನ ಫಲವೆಂದು ತಿಳಿಯುವವರು ಇವರು (೨.೪೩). ಹೂವಿನಂತೆ ತೋರಿಕೆಯಲ್ಲಿ ಮಾತ್ರವೇ ಅಂದವಾದ ಭೋಗೈಶ್ವರ್ಯಗಳನ್ನು ಸಂಪಾದಿಸಿ ಕೊಡುವ ಮಾರ್ಗವಿದು (೨.೪೪). ಇಂಥವರು ಯೋಗಭ್ರಷ್ಟರೂ ಆಗಿರಬಹುದು (೬.೩೭). ಅವರು ತಮ್ಮ ಸತ್ಕೃತ್ಯಗಳಿಂದುಂಟಾದ ಪುಣ್ಯವನ್ನು ಅನುಭವಿಸಿ, ಮರಳಿ ಈ ಲೋಕದಲ್ಲಿ ಹುಟ್ಟುತ್ತಾರೆ (೬.೪೧). ಇವರು ಪರಮಾತ್ಮನನ್ನು ಭಜಿಸದೆ ಅನ್ಯದೇವತೆಗಳನ್ನು ಪೂಜೆಮಾಡುವವರು (೭.೨೨). ತ್ರೈವಿದ್ಯರೆಂಬವರು ಸ್ವರ್ಗವು ಬೇಕೆಂದು ಪ್ರಾರ್ಥಿಸಿಕೊಳ್ಳುವವರು (೯.೧೯). ಅವರೂ ಪೂತಪಾಪರೇನೋ ಅಹುದು (೯.೨೦). ಆದರೆ, ಅವರು ಹೆಚ್ಚಿನ ಮಹತ್ವಾಕಾಂಕ್ಷಿಗಳಲ್ಲ, ಅವರಿಗೆ ಲೋಭ ಹೆಚ್ಚು (೧೪.೧೭); ಇಂಥ ರಾಜಸ ಜನರಿಗೂ ಗೀತೆಯು ಮಹತ್ವವನ್ನು ಕೊಡುವುದಿಲ್ಲವೆಂಬುದನ್ನು ಮರೆಯಬಾರದು. ಗೀತೆಯು ಲೋಕದ ಇದುರಿಗೆ ಅತ್ಯುಚ್ಚವಾದ ಧ್ಯೇಯವೊಂದನ್ನೇ ಇಡುತ್ತದೆ. ಅದು ಯಾವತ್ತು ಧರ್ಮಗಳನ್ನು ಕುರಿತು ವಿವೇಚಿಸುವುದಿಲ್ಲ. ಪರಮಧರ್ಮವೊಂದನ್ನೇ ಕುರಿತು ವಿವೇಚಿಸಿರುತ್ತದೆ. ಧರ್ಮಾಧರ್ಮಗಳ ವಿವರಗಳನ್ನು ಹೇಳುವುದಕ್ಕೆ ಮನುಸ್ಮೃತ್ಯಾದಿ ಗ್ರಂಥಗಳು ಇರುತ್ತವೆ;

ಅವುಗಳ ಪಟ್ಟಿಯನ್ನು ನಾವು ಅಲ್ಲಿ ಕಾಣಬಹುದು. ಗೀತೆಯಲ್ಲಿ ಅನೇಕ ಧರ್ಮಾಧರ್ಮಗಳ ಉಲ್ಲೇಖವಿದ್ದರೂ ಅವುಗಳ ಉದ್ದೇಶವು ಧರ್ಮಾಧರ್ಮಗಳ ಪಟ್ಟಿಯನ್ನು ಕೊಡುವುದಿರದೆ, ಪರಮಧರ್ಮವನ್ನವಲಂಬಿಸಿದವನ ಲಕ್ಷಣಗಳು ಯಾವುವೆಂಬುದನ್ನು ಹೇಳುವುದಷ್ಟೇ ಇರುತ್ತದೆ. ಸ್ಥಿತಪ್ರಜ್ಞನ ಲಕ್ಷಣಗಳು (೨.೫೪-೭೦) ಭಕ್ತನ ಲಕ್ಷಣಗಳು (೧೨.೧೩-೨೦) ಗುಣಾತೀತನ ಲಕ್ಷಣಗಳು (೧೪.೨೨-೨೬) ಎಂಬುದಾಗಿ ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಧರ್ಮಗಳು ಕೊಡಲ್ಪಟ್ಟಿವೆ. ಹಾಗೆಯೇ ಜ್ಞಾನಕ್ಕೆ ಸಾಧನಗಳಾವವೆಂಬುದನ್ನು ಹೇಳುವಾಗಲೂ ಅಮಾನಿತ್ವ, ಅದಂಭತ್ವಾದಿ (೧೩.೮-೧೨; ೧೫.೫) ಅನೇಕ ಧರ್ಮಗಳು ಹೇಳಿವೆ. ಪುರಂದರ ದಾಸರೂ ಕೂಡ,

> ವಿಷವನುಣಿಸಿದರೆ ಷಡ್ರಸವನುಣಿಸಲು ಬೇಕು ।
> ಅಸೂಯ ಪಡುವವನ ಪೋಷಿಸಲು ಬೇಕು ।
> ಎಂದಿಗೂ ಸೇರದವನ ಹಾಡಿಹರಸಲು ಬೇಕು ।
> ಕೊಂದವನ ಗೆಳೆತನವ ಮಾಡಬೇಕು ।
> ಹಿಂದೆ ನಿಂದಿಸುವವನ ವಂದಿಸುತಲಿರಬೇಕು ।
> ಬಂದನದೊಳಿಟ್ಟವನ ಬಿಡಿಸಬೇಕು ।
> ಕೊಂಡೊಯ್ದು ಕೊಲಿಸುವರ ಕೊಂಡಾಡುತಿರಬೇಕು ।
> ಕಂದರಾಗದವನ ಹೊಗಳಬೇಕು ।

ಎಂಬುದಾಗಿ, ಬಹುಶಃ ಗೀತೆಯಲ್ಲಿ ಬಂದಿರುವ ಗುಣಗಳನ್ನೇ ಹಾಡಿರುವರು. ಆದರೂ, ಗೀತೆಯ ಮುಖ್ಯ ಗುರಿಯು ಇವೆಲ್ಲ ಧರ್ಮಗಳ ಬುಡಕ್ಕಿರುವ ಮೂಲತತ್ತ್ವವನ್ನು ಹೇಳುವುದೇ ಇರುತ್ತದೆಂಬುದನ್ನು ಕಣ್ಮರೆ ಮಾಡಿ ಪ್ರಯೋಜನವಿಲ್ಲ.

ಆದಕಾರಣ, ಪರಮಧರ್ಮದ ವಿಷಯವಾಗಿ ಅದರ ಅಂಬೋಣವೇನಿರುತ್ತದೆಂಬುದನ್ನು ನೋಡುವ. ಇದರ ವಿಷಯಕ್ಕೆ ಗೀತೆಯ ಮೊದಲನೆಯ ಹೇಳೋಣವೇನೆಂದರೆ ಪರಮಾತ್ಮನ ದ್ವೇಷಿಗಳನ್ನೂ ಅವರ ಅನುಬಂಧಿಗಳನ್ನೂ ನಿಗ್ರಹಿಸುವುದು ಸಕಲಭಾಗವತರ—ವಿಶೇಷತಃ ಕ್ಷತ್ರಿಯರ ಪರಮಧರ್ಮವು. ಅರ್ಜುನನು ಬಂಧುಸ್ನೇಹದಿಂದ ಅದನ್ನು ಅಧರ್ಮವೆಂದು ಭಾವಿಸಿದ್ದನು. ಅದು ಅಧರ್ಮವಲ್ಲ, ಧರ್ಮವೆಂದು

ಹೇಳುವುದೇ ಈ ವಿಷಯದಲ್ಲಿ ಗೀತೆಯ ಮೊದಲನೆಯ ಸಿದ್ಧಾಂತ. ಬಂಧುಗಳನ್ನೂ ಗುರುಗಳನ್ನೂ ಕೊಲ್ಲುವುದು ಪರಮಧರ್ಮವೆಂದು ಗೀತೆಯು ಹೇಳುವುದಿಲ್ಲ. ಪರಮಾತ್ಮನ ದ್ವೇಷಿಗಳನ್ನು—ಆ ಬಳಿಕ, ಅವರು ಬಂಧುಗಳೇ ಇರಲಿ, ಯಾರೇ ಇರಲಿ—ನಿಗ್ರಹ ಮಾಡುವುದು ಪರಮ ಧರ್ಮವೆಂದು ಹೇಳುತ್ತದೆ.

ನಿಗ್ರಹಮಾಡುವುದೇ ಪರಮಧರ್ಮವೆಂದು ಹೇಳುತ್ತದಲ್ಲದೆ, ಯುದ್ಧವನ್ನು ಮಾಡುವುದೇ ಪರಮಧರ್ಮವೆಂದು ಗೀತೆಯು ಹೇಳುವುದಿಲ್ಲ. ನಿಗ್ರಹಮಾಡುವುದಕ್ಕೆ ಹೇಳುವುದು ಗೀತೆಯ ಮುಖ್ಯ ಉದ್ದೇಶವಲ್ಲದೆ, ಕೊಲ್ಲುವುದೇ ಪರಮಧರ್ಮವೆಂದು ಹೇಳುವುದು ಗೀತೆಯ ಉದ್ದೇಶವಲ್ಲ. ಮುಖ್ಯ ಕಾರ್ಯವು ನಿಗ್ರಹವು, ಹಿಂಸೆಯಲ್ಲ. ಹಿಂಸೆ ಅಥವಾ ಅಹಿಂಸೆಗಳು ಗೌಣವಿಷಯಗಳು. ಮಾಡುವವನು ತಾನು ಎಂಬ ಹಮ್ಮು ಯಾವನಿಗೆ ಇಲ್ಲವೋ ಮತ್ತು ಯಾವನ ಬುದ್ಧಿಗೆ (ದೋಷದ) ಲೇಪವಿಲ್ಲವೋ ಆತನು ಈ ಎಲ್ಲ ಪ್ರಾಣಿಗಳನ್ನು ಕೊಂದರೂ ಬದ್ಧನಾಗುವದಿಲ್ಲ (೧೮.೧೭), ಎಂದರೆ ಆ ಕೊಂದ ದೋಷವು ಆತನಿಗೆ ತಗಲುವುದಿಲ್ಲವೆಂಬುದಾಗಿ ಗೀತೆಯು ಸ್ಪಷ್ಟವಾಗಿ ಹೇಳಿರಲು, ಗೀತೆಯೊಳಗಿಂದ ಅಹಿಂಸೆಯು ಪರಮಧರ್ಮವೆಂದು ಎಳೆದು ತೆಗೆಯುವವರು ಬಲು ಸಾಹಸಿಕರು. ಅದೇ ಮೇರೆಗೆ ಸಾಮಾನ್ಯ ಜನರು ಸಾಮಾನ್ಯ ರೀತಿಯಲ್ಲಿ ಮಾಡುವ ಯುದ್ಧವನ್ನು ಗೀತೆಯು ಎತ್ತಿಹಿಡಿಯುವುದಿಲ್ಲವೆಂಬುದನ್ನೂ ಮರೆಯಬಾರದು. ಯುದ್ಧಮಾಡು ಎಂದು ಹೇಳುವುದಷ್ಟೆ ಗೀತೆಯು ಪರಮಧರ್ಮವೆಂದು ಹೇಳಿಲ್ಲದೆ, ವಿಶಿಷ್ಟವಾದ ಮತ್ತು ಉತ್ಕೃಷ್ಟತಮವಾದ ಮನಃಸ್ಥಿತಿಯಲ್ಲಿ ನಿಂತು, ಪರಮಾತ್ಮನ ಪೂಜೆಯೆಂದು ಯುದ್ಧಮಾಡುವುದು ಪರಮಧರ್ಮವೆಂದು ಗೀತೆಯು ಹೇಳುತ್ತದೆಂಬುದನ್ನೂ ನೆನಪಿನಲ್ಲಿ ಇಡಬೇಕು.

ದುಷ್ಟರ ಶಿಕ್ಷೆ, ಶಿಷ್ಟರ ರಕ್ಷಣೆ ಮಾಡುವುದು ಹೇಗೆ ಪರಮಾತ್ಮನ ಧರ್ಮವೋ (೪.೮) ಹಾಗೆ ಅದು ಸಕಲರ ಧರ್ಮವೂ ಆಗಿದೆ. ಪರಮಾತ್ಮನ ಆಚರಣೆಯಂತೆ ಜ್ಞಾನಿಗಳ ಆಚರಣೆ (೩.೨೧, ೪.೧೧). ಹೀಗೆ ದುಷ್ಟನಿಗ್ರಹವು ಸಕಲಭಾಗವತರ ಸಾಮಾನ್ಯಧರ್ಮವಾದರೂ ಕ್ಷತ್ರಿ

ಯರಿಗೆ ಅದು ಪರಮಧರ್ಮವಾಗಿದೆ. ಬ್ರಾಹ್ಮಣರು ಆ ದುಷ್ಟ ನಿಗ್ರಹದ ಕೆಲಸವನ್ನು ಪ್ರತ್ಯಕ್ಷವಾಗಿ ಮಾಡುವುದಿಲ್ಲ. ಅಪ್ರತ್ಯಕ್ಷವಾಗಿ ಎಂದರೆ, ಕ್ಷತ್ರಿಯರಿಂದ ಮಾಡಿಸುತ್ತಾರೆ; ಏಕೆಂದರೆ, ಆ ಕೆಲಸವು ಕ್ಷತ್ರಿಯರ ಸ್ವಭಾವಕ್ಕೆ ಹೆಚ್ಚಿಗೆ ಒಗ್ಗುತ್ತದೆ. ವಿದ್ಯಾರಣ್ಯ, ರಾಮದಾಸ ಮುಂತಾದವರ ಉದಾಹರಣೆಯು ನಮಗೆ ಇದನ್ನೇ ಬೋಧಿಸುತ್ತದೆ. ಅಹಿಂಸೆಯು ಹಿಂಸೆಗಿಂತ ಹೆಚ್ಚಿನದಾದುದರಿಂದ,ಬ್ರಾಹ್ಮಣರು ಸಾಮಾನ್ಯವಾಗಿ ಸ್ವವಿಹಿತವೃತ್ತಿಯಾದ ಅಹಿಂಸೆಯಲ್ಲಿಯೇ ಮಗ್ನರಾಗಿರುತ್ತಾರೆ. ಹಿಂಸೆಯ ಆವಶ್ಯಕತೆಯಿದ್ದಲ್ಲಿ ಅದನ್ನು, ಅದಕ್ಕೆ ತಕ್ಕ ಸ್ವಭಾವದವರಿಂದ ಮಾಡಿಸುತ್ತಾರೆ. ಆದರೆ ಅಹಿಂಸೆಗಿಂತ ದುಷ್ಟನಿಗ್ರಹವು ಹೆಚ್ಚಿನ ಧರ್ಮವಾದುದರಿಂದ, ಕ್ಷತ್ರಿಯರ ತೀರ ಅಭಾವದಲ್ಲಿ ಮಾತ್ರ, ಆ ಕಾರ್ಯವನ್ನು ತಮ್ಮ ಮೈಮೇಲೆ ತೆಗೆದುಕೊಳ್ಳುವುದಕ್ಕೆ ಹಿಂದುಮುಂದೆ ನೋಡುವುದಿಲ್ಲ.

ಮೇಲ್ಕಾಣಿಸಿದ ವಿವೇಚನೆಯಿಂದ ಹೊರಡುವ ಮುಖ್ಯ ಸಿದ್ಧಾಂತವೇನೆಂದರೆ, ಸ್ವವಿಹಿತವೃತ್ತಿಯಿಂದಲೂ ಭಕ್ತಿಯಿಂದಲೂ ಭಗವದಾರಾಧನೆ ಮಾಡುವುದೇ ಪ್ರತಿಯೊಬ್ಬರ ಪರಮಧರ್ಮವೆಂಬುದು. ಇದರಲ್ಲಿ ಮೂರು ಪ್ರಮೇಯಗಳು ಅಡಕವಾಗಿವೆ. (೧) ಸ್ವವಿಹಿತವೃತ್ತಿ (೨) ಭಕ್ತಿ (೩) ಭಗವದಾರಾಧನೆ. ಇವು ಮೂರೂ ಅಂಗಗಳಿಂದ ಕೂಡಿದ್ದೇ ಪರಮಧರ್ಮವು. ಒಂದೊಂದೇ ಪರಮಧರ್ಮವಲ್ಲ. ಅರ್ಜುನನಿಗೆ ತಾನು ಮಾಡುವುದು ಅಧರ್ಮವು ಎಂದು ಶಂಕೆಯುಂಟಾಗುವುದಕ್ಕೆ ಕಾರಣವೇನೆಂದರೆ, ಆತನ ಭಕ್ತಿಯು ತುಸು ಸಡಿಲಾಗಿತ್ತು. ಆದಕಾರಣ, ಶ್ರೀಕೃಷ್ಣನು ಭಕ್ತಿವೈರಾಗ್ಯಾದಿಗಳನ್ನು ಮತ್ತಿಷ್ಟು ದೃಢಪಡಿಸವುದಕ್ಕೋಸ್ಕರ ಗೀತೆಯಲ್ಲಿ ಅವುಗಳನ್ನು ನಿರೂಪಿಸಿರುವನು. ಭಕ್ತಿಯು ಪರಮಧರ್ಮದ ಅಂಗವಾದುದರಿಂದಲೇ ಅದಕ್ಕೆ ಗೀತೆಯಲ್ಲಿ ಸ್ಥಾನ. ಭಕ್ತಿವಿರಹಿತವಾದ ಸ್ವವಿಹಿತವೃತ್ತಿಗೆ ಗೀತೆಯು ಬೆಲೆಕೊಡುವುದಿಲ್ಲ. ಸ್ವವಿಹಿತವೃತ್ತಿವರ್ಜಿತವಾದ ಭಕ್ತಿಗೂ ಬೆಲೆ ಇಲ್ಲ. ಎಲ್ಲರೂ 'ರಾಮ, ರಾಮ' ಎಂದು ರಾಮನಾಮದ ಜಯಘೋಷದಲ್ಲಿ ತಾಳ ಕಟೆಯುತ್ತ ಕುಳ್ಳಿರಬೇಕೆಂದು ಗೀತೆಯ ಉಪದೇಶವಲ್ಲ. ಸ್ವಕರ್ತವ್ಯ

ಶೂನ್ಯವಾದ ಭಕ್ತಿಯೂ ಪರಮಧರ್ಮವಲ್ಲ. ಸ್ವವಿಹಿತವೃತ್ತಿ, ಭಕ್ತಿ ಇವು ಗಳು ಕೂಡಿದರೆ ಮಾತ್ರವೇ ಪರಮಧರ್ಮವಾಗುತ್ತದೆ. ಆದಕಾರಣ ಸ್ವವಿಹಿತವೃತ್ತಿಯನ್ನು ಬಿಟ್ಟು ಕೇವಲ ಭಕ್ತ್ಯಾದಿಗಳನ್ನು ಮಾಡಿದರೂ ಪರಮಧರ್ಮದಿಂದ ನಿವೃತ್ತವಾದಂತೆಯೇ ಆಯಿತು. ಹಾಗೆಯೇ ಸ್ವವಿಹಿತವೃತ್ತಿಯನ್ನು ಮಾಡಿ ಭಕ್ತ್ಯಾದಿಗಳನ್ನು ಬಿಟ್ಟರೂ ಪರಮ ಧರ್ಮದಿಂದ ನಿವೃತ್ತವಾದಂತೆಯೇ ಆಯಿತು.

ಮೇಲಾಗಿ ಮೂರನೆಯದೊಂದು ಅಂಶವೂ ಅಗತ್ಯವಿದೆ. ಅದೇ ನೆಂದರೆ ಇವೆಲ್ಲವೂ ಭಗವಂತನ ಆರಾಧನೆಯೆಂಬ ಭಾವನೆಯಿಂದ ಮಾಡ ಲ್ಪಟ್ಟರೆ ಮಾತ್ರವೇ ಅವಕ್ಕೆ ಪರಮಧರ್ಮದ ಸ್ವರೂಪವು ಬರುತ್ತದಲ್ಲದೆ, ಇಲ್ಲದಿದ್ದರೆ ಇಲ್ಲ. ಭಗವಂತನ ಆರಾಧನೆಯೆಂದು ತಿಳಿಯದೆ ಸ್ವಂತದ ಆರಾಧನೆಯ ಸಲುವಾಗಿ ಅಥವಾ ಅನ್ಯದೇವತೆಗಳ ಆರಾಧನೆಯೆಂದು ಇವನ್ನು ಆಚರಿಸಿದರೆ ಅವಕ್ಕೆ ಪರಮಧರ್ಮವೆನ್ನುವುದಿಲ್ಲ. ಆದಕಾರಣ, ಯುದ್ಧಮಾಡುವುದೂ ಭಗವಂತನ ಪೂಜೆಯೆಂದೇ ತಿಳಿಯಬೇಕೆಂದು ಅರ್ಜುನನಿಗೆ ಶ್ರೀಕೃಷ್ಣನ ಉಪದೇಶ. ಇಲ್ಲಿ ಇಷ್ಟು ಸಾಕು. ಇವುಗಳ ವಿಸ್ತಾರವಾದ ವಿವೇಚನೆಯನ್ನು ಮುಂದೆ ಮಾಡುವವರೇ ಇದ್ದೇವೆ.

ಪರಮಧರ್ಮಕ್ಕೆ ವಿರುದ್ಧವಾದುದೆಲ್ಲವೂ ಅಧರ್ಮವು. ಎಂದರೆ (೧) ವಿಹಿತಾನುಷ್ಠಾನವನ್ನು ಮಾಡಿ, ಭಕ್ತ್ಯಾದಿಗಳನ್ನು ಮಾಡದಿರು ವುದು, (೨) ಭಕ್ತ್ಯಾದಿಗಳನ್ನು ಮಾಡಿ ಸ್ವವಿಹಿತವೃತ್ತಿಯನ್ನು ಬಿಡು ವುದು, (೩) ಭಕ್ತಿಯಿಂದ ವಿಹಿತಾನುಷ್ಠಾನವನ್ನು ಮಾಡಿದರೂ ಫಲದಲ್ಲಿ ರಾಗವನ್ನಿಡುವುದು, (೪) ಭಗವತ್ಸಮರ್ಪಣವನ್ನು ಮಾಡದಿರುವುದು (೫) ಮತ್ತು ವಿಕರ್ಮಗಳಲ್ಲಿ ಎಂದರೆ ವಿಪರೀತವಾದ ಕರ್ಮಗಳಲ್ಲಿ ಸಂಗವನ್ನಿಡುವುದು–ಇವೇ ಮುಂತಾದವುಗಳೆಲ್ಲವೂ ಅಧರ್ಮಗಳು.

ಈ ಪರಮಧರ್ಮವನ್ನು ಗೀತೆಯು ಮತ್ತೊಂದು ಸ್ವರೂಪದಲ್ಲಿ ಇಟ್ಟಿರುತ್ತದೆ. ಸ್ವಧರ್ಮವನ್ನನುಸರಿಸುವುದು ಪರಮ ಧರ್ಮವು, ಪರ ಧರ್ಮವನ್ನನುಸರಿಸುವುದು ಅಧರ್ಮವು ( ೩.೩೫ ) ಎಂಬುದಾಗಿ ಗೀತೆಯು ೩.೩೫ ಮತ್ತು ೧೮.೪೭ ನೆಯ ಶ್ಲೋಕಗಳಲ್ಲಿ ವ್ಯಕ್ತಪಡಿಸಿದೆ. ಈ ಸ್ವಧರ್ಮವನ್ನೇ ಸ್ವಭಾವನಿಯತ ಕರ್ಮ (೧೮.೪೭), ಸ್ವಕರ್ಮ

(೧೮.೪೪, ೧೮.೪೫, ೧೮.೪೬) ಸಹಜ ಕರ್ಮ (೧೮.೪೮), ಸ್ವಭಾವಜ ಕರ್ಮ (೧೮.೬೦), ನಿಯತಕರ್ಮ (೩.೮) ಕಾರ್ಯಂ ಕರ್ಮ (೩.೧೯, ೬.೧೮) ಗುಣಕರ್ಮವಿಭಾಗಶಃ ಕರ್ಮ (೪.೧೩), ಪ್ರಕೃತಿ ಸದೃಶಕರ್ಮ (೩.೩೩) ಸತ್ತ್ವಾನುರೂಪ ಕರ್ಮ (೧೭.೩), ಶಾಸ್ತ್ರವಿಧಾನೋಕ್ತ ಕರ್ಮ (೧೬.೨೪) ಇವೇ ಮುಂತಾಗಿ ನಾನಾ ರೀತಿಯಲ್ಲಿ ವರ್ಣಿಸಿರುತ್ತದೆ.

ಗೀತೆಯ ಈ ಸಿದ್ಧಾಂತವು ಕಾಣಲಿಕ್ಕೇನೋ ಸುಂದರವಾದುದೂ ಸುಲಭವಾದುದೂ ಸಹಜವಾದುದೂ ಕಾಣುತ್ತದೆ. ಆದರೆ ಅದು ಕಾಣುವಷ್ಟು ಸುಲಭವಾದುದಲ್ಲ. ಅದಕ್ಕೆ ಅಂಟಿಕೊಳ್ಳುವುದರಿಂದ, ನಮ್ಮ ಈಗಿನ ವಿಚಾರ ಆಚಾರಗಳಲ್ಲಿ ಅನೇಕ ಕ್ರಾಂತಿಗಳುಂಟಾಗುತ್ತವೆ. ಎಲ್ಲರೂ ನೂಲುವ ಶಾರೀರಿಕ ಶ್ರಮವನ್ನೇ ತೆಗೆದುಕೊಳ್ಳಲು ಒತ್ತಾಯಪಡಿಸುವುದು ಇಂಥ ಅಜ್ಞಾನದ ಪರಿಣಾಮವಲ್ಲವೆ ? ಎಲ್ಲರಿಗೂ ದಂಡಿನ ಶಿಕ್ಷಣವನ್ನು ಒತ್ತಾಯದಿಂದ ಕೊಡುವ ಪದ್ಧತಿಯು ಈ ತತ್ತ್ವದ ಪ್ರಕಾರ ತ್ಯಾಜ್ಯವಾಗುತ್ತದೆ. ಅದೇಕೆ ? ಎಲ್ಲರಿಗೂ ಒತ್ತಾಯದಿಂದ ಬೌದ್ಧಿಕ ಶಿಕ್ಷಣವನ್ನು ಕೊಡುವ ತತ್ತ್ವವು ಕೂಡ ಇದರ ಮೇರೆಗೆ ಗೌಣವಾಗುತ್ತದೆ. ಸಾರಾಂಶ, ಸಾತ್ವಿಕರಾಜಸತಾಮಸಜೀವಿಗಳಲ್ಲಿ ಸ್ವಭಾವ ಭೇದವಿರುತ್ತದೆಂಬ ಮೂಲತತ್ತ್ವವನ್ನು ಮರೆತು, ಅವರವರ ಸ್ವಧರ್ಮವನ್ನು ಕಂಡುಹಿಡಿದು ಅದಕ್ಕನುಸಾರವಾದ ಉಪದೇಶ ಮಾಡುವುದನ್ನು ಬಿಟ್ಟುಕೊಟ್ಟು, ಸರ್ವರಿಗೂ ಒಂದೇವಿಧವಾದ ಧರ್ಮವನ್ನು ಉಪದೇಶಿಸುವುದೂ ಸರ್ವರೆದುರಿಗೆ ಒಂದೇ ಧ್ಯೇಯವನ್ನಿಡುವುದೂ ಸನಾತನ ಸಂಸ್ಕೃತಿಗೆ ವಿರುದ್ಧವಾದ ಪದ್ಧತಿಯು. ಯಾರಿಗೆ ಗೀತೆಯ ಉಪದೇಶದಲ್ಲಿ ಅಚಲವಾದ ವಿಶ್ವಾಸವಿದೆಯೋ, ಯಾರಿಗೆ ಸನಾತನ ಸಂಸ್ಕೃತಿಯ ಅಭಿಮಾನವಿದೆಯೋ ಅವರು ಈ ಗೀತಾತತ್ತ್ವದ ಮರ್ಮವನ್ನು ಒಳಿತಾಗಿ ಮನನಮಾಡಿಕೊಳ್ಳಲೇಬೇಕು.

———

## ೭ನೆಯ ಪ್ರಕರಣ

# ಸರ್ವವೂ ಭಗವದಧೀನವು

ಹೇಸರಿಲ್ಲರು ಎನ್ನ ದಾಸರು ।
ಶ್ರೀವಧುವೆ ಎನ್ನರಸಿ ಜಗದಿ ।
ಜೀವರಾಶಿಯ ನಾನೆ ಪುಟ್ಟಿಸಿ, ಮುಗುಳೆ ರಕ್ಷಿಪೆನು ॥

ಪಾಪಕರ ಕೊಲಿಸುವೆನು ನರಕವ ।
ನೀವೆ ಸ್ವರ್ಗವನಿತ್ತು ಸುಜನರ ।
ಕಾಪೆನಿದು ವೇದಾಂತಸಿದ್ಧಾಂತದ ರಹಸ್ಯ ಕಣಾ ॥

—ವಾದಿರಾಜ

ಧರ್ಮವು ಗೀತೆಯ ಮುಖ್ಯ ವಿಷಯಗಳಲ್ಲೊಂದೆಂಬುದನ್ನು ಹಿಂದಿನ ಪ್ರಕರಣದಲ್ಲಿ ಚರ್ಚಿಸಿಯೇ ಇರುವೆವು. ಇನ್ನು ಗೀತೆಯಲ್ಲಿ ಬಂದಿರುವ ಎರಡನೆಯ ಮುಖ್ಯ ವಿಷಯವೆಂದರೆ ಜ್ಞಾನ—ಪರಮಾತ್ಮ ವಿಷಯಕ ಜ್ಞಾನ. ಇದು ಗೀತೆಯ ಎರಡನೆಯ ಷಟ್ಕದಲ್ಲಿ ಅಂದರೆ ೭ರಿಂದ ೧೨ರ ವರೆಗಿನ ಅಧ್ಯಾಯಗಳಲ್ಲಿ ಪ್ರಾಮುಖ್ಯವಾಗಿ ಬಂದಿದೆ. ಮಿಕ್ಕ ಕಡೆಗೂ ಅಲ್ಲಲ್ಲಿ ಬಂದಿದೆ. ಅವೆಲ್ಲವುಗಳ ಸಾರವನ್ನು ಕೊಡುವುದು ನಮ್ಮ ಉದ್ದೇಶವಲ್ಲ. ಗೀತೆಯ ಸಂದೇಶವೆಂದು ನಾವು ಹೇಳಿದ ಪ್ರಮೇಯಗಳಲ್ಲಿ ಬಂದಿರುವ "ಸರ್ವವೂ ಭಗವದಧೀನ"ವೆಂಬ ಸಿದ್ಧಾಂತವನ್ನು ತಿಳಿಯುವುದಕ್ಕೆ ಬೇಕಾಗುವಷ್ಟು ಸಾರವನ್ನು ಮಾತ್ರವೇ ಇಲ್ಲಿ ಕೊಡುತ್ತೇವೆ. ಸರ್ವವೂ ಭಗವಂತನ ಅಧೀನದಲ್ಲಿರುತ್ತದೆಂದು ಹೇಳುವುದೇ ಗೀತೆಯಲ್ಲಿ ಬಂದಿರುವ ಯಾವತ್ತೂ ಜ್ಞಾನದ ಒಟ್ಟು ತಾತ್ಪರ್ಯವು. ಈ ತತ್ತ್ವವು ಕೆಲವು ಕಡೆಗೆ ಸಾಕ್ಷಾತ್ತಾಗಿ ಬಂದಿದೆ, ಮತ್ತೆ ಕೆಲವು ಕಡೆಗೆ, ಅದು ಪರಂಪರೆಯಿಂದ ಗೊತ್ತಾಗುತ್ತದೆ. ಏಕೆಂದರೆ, ಅವುಗಳಲ್ಲಿ ಪರಮಾತ್ಮನು ಸರ್ವಜ್ಞನು, ಸರ್ವಗುಣಪರಿಪೂರ್ಣನು, ಸರ್ವದೋಷವರ್ಜಿತನು, ಅನನ್ಯಾಧೀನನು, ಮೋಕ್ಷಪ್ರದನು, ಸೃಷ್ಟಿ—ಸ್ಥಿತಿ—ಲಯಗಳ ಕರ್ತನು ಇವೇ ಮುಂತಾಗಿ ವರ್ಣನೆಯಿರುವುದರಿಂದ, ಅವು

ಗಳಿಂದಲೂ ಸರ್ವವೂ ಭಗವದಧೀನವೆಂಬ ಮುಖ್ಯ ಮಾತೇ ಸಿದ್ಧವಾಗು ತ್ತದೆ.

ಗೀತೆಯಲ್ಲಿ ಪರಮಾತ್ಮನು ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ ಇವುಗಳ ಕರ್ತನೆಂದೇ ವರ್ಣನೆಯಿ ರುವುದು. ಅದರಿಂದ ಜಗತ್ತೆಲ್ಲವೂ ಹೇಗೆ ಆತನ ಅಧೀನದಲ್ಲಿರುತ್ತದೆಂ ಬುದು ಗೊತ್ತಾಗುವುದು. ಗೀತೆಯ ಅನೇಕ ಶ್ಲೋಕಗಳಲ್ಲಿ ಪ್ರಕೃತ್ಯಾದಿ ಗಳ ವರ್ಣನೆ ಬಂದಿರುವುದು. ಸತ್ತ್ವರಜತಮೋಗುಣಗಳ ವರ್ಣನೆ ಬಂದಿ ರುವುದು. ದೈವೀ ಆಸುರೀ ಸಂಪತ್ತಿನ ವರ್ಣನೆ ಬಂದಿರುವುದು. ಇವೆ ಲ್ಲವುಗಳ ಮುಖ್ಯ ಪ್ರಯೋಜನವೂ ಸರ್ವವೂ ಭಗವದಧೀನವೆಂಬ ಸಿದ್ಧಾಂತವನ್ನು ಪುಷ್ಟೀಕರಿಸುವುದೇ ಇರುತ್ತದೆ. ಏಕೆಂದರೆ, ನಿಜವಾಗಿ, ಮೂರುಲೋಕಗಳ ಧಾರಣಪೋಷಣ ಶಕ್ತಿಯು ಪರಮಾತ್ಮನದು, ಪ್ರಕೃತಿಯು ಆತನ ಅಧೀನದಲ್ಲಿದ್ದು ಕೆಲಸ ಮಾಡುವವಳು; ಸತ್ತ್ವ ರಜ ತಮಗಳೆಂಬ ಗುಣಗಳು ಪ್ರಕೃತಿಯಿಂದ ಹುಟ್ಟಿದವುಗಳೆಂದು (೧೪.೫) ಹೇಳಿರುವುದು. ಪ್ರಕೃತಿಯಾದರೋ ಭಗವಂತನ ಅಧೀನಳು; ಎಂದ ಬಳಿಕ, ಆ ಮೂರೂ ಗುಣಗಳೂ ಕೂಡ ಪರಮಾತ್ಮನ ಅಧೀನದಲ್ಲಿರುತ್ತ ವೆಂಬುದನ್ನು ಬೇರೆ ಹೇಳುವ ಕಾರಣವೇ ಇಲ್ಲ. ಅದೇ ಮೇರೆಗೆ ದೈವೀ ಆಸುರೀ ಸಂಪತ್ತುಗಳೂ ಆತನ ಅಧೀನವಾದ ವಸ್ತುಗಳೇ. ಏಕೆಂದರೆ, ದೈವೀಸಂಪತ್ತುಳ್ಳವರು ಮೋಕ್ಷಪಡೆಯುವರೆಂದೂ (೧೬.೮) ಆಸುರೀ ಸಂಪತ್ತುಳ್ಳವರು ಪರಮಾತ್ಮನನ್ನು ಹೊಂದದೆ ಅಧಮಗತಿಯನ್ನು ಹೊಂದುತ್ತಾರೆಂದೂ ಹೇಳಿದೆ (೧೬.೨೦). ಅದರಿಂದ ಅವೆರಡೂ ಭಗ ವಂತನ ಅಧೀನವಾಗಿರುತ್ತವೆಂಬುದನ್ನು ಹೇಳಿದಂತಾಗಲಿಲ್ಲವೆ? ಈ ಬಗೆ ಯಾಗಿ, ಸರ್ವವೂ ಭಗವದಧೀನವಾಗಿರುತ್ತದೆಂಬ ಸಿದ್ಧಾಂತವು ಅನೇಕ ರೀತಿಯಿಂದ ಸಿದ್ಧಪಡಿಸಲ್ಪಟ್ಟಿದೆ.

ಇಲ್ಲಿ, ವಾಚಕರಿಗೆ, ಪುನಃ ಒಂದೆರಡು ಹಿಂದಿನ ಮಾತುಗಳನ್ನು ನೆನಪಿಗೆ ತಂದುಕೊಡುತ್ತೇವೆ. ನಾವು ಹಿಂದೆ ಹೇಳಿದಂತೆ ದ್ವೈತಾ ದ್ವೈತವಾದದಲ್ಲಿ, ನಾವು ಪ್ರವೇಶಿಸುವುದಿಲ್ಲ. ಆ ವಾದವನ್ನು ಗೀತೆ ಯಲ್ಲಿ ಎತ್ತಲೇಬಾರದೆಂಬ ಉದ್ದೇಶದಿಂದಲೋ ಏನೋ ಎಂಬಂತೆ,

ಎಲ್ಲೆಲ್ಲಿ ಆ ಪ್ರಶ್ನೆಯು ಬರಬಹುದೆಂದು ಅಪೇಕ್ಷಿಸುವೆವೋ ಅಲ್ಲಲ್ಲಿ, ಕೃಷ್ಣನು ಸಂದಿಗ್ಧವಾದ ಶಬ್ದಪ್ರಯೋಗಗಳನ್ನು ಮಾಡಿರುವನು. ಉದಾ—೨ ನೆಯ ಅಧ್ಯಾಯದಲ್ಲಿ ಈಶ್ವರನಿಗೂ ಜೀವನಿಗೂ ಉಭಯರಿಗೂ ಅನ್ವಯಿಸುವಂಥ ಶಬ್ದಪ್ರಯೋಗಗಳಿರುವವು. ಆದಕಾರಣವೇ ಆ ಪ್ರಕರಣವನ್ನು ಶಂಕರಾಚಾರ್ಯರು ಬ್ರಹ್ಮಪರವಾಗಿ ಹಚ್ಚಲಿಕ್ಕೂ ಅದಕ್ಕೆ ತೀರ ವಿರುದ್ಧವಾಗಿ ರಾಮಾನುಜಾಚಾರ್ಯರು ಜೀವಪರವಾಗಿ ಹಚ್ಚಲಿಕ್ಕೂ ಮಾರ್ಗವಾಗಿರುವುದು. ಮಧ್ವಾಚಾರ್ಯರು ಜೀವನ ವಿಶೇಷಣಗಳಿದ್ದಲ್ಲಿ ಜೀವಪರವಾಗಿಯೂ ಬ್ರಹ್ಮನ ವಿಶಿಷ್ಟವಿಶೇಷಣಗಳಿದ್ದಲ್ಲಿ ಬ್ರಹ್ಮಪರವಾಗಿಯೂ ಹಚ್ಚಿರುವರು. ತತ್, ಯಂ, ಅಸ್ಯ, ಏನಂ, ಅಯಂ ಎಂದು ಮುಂತಾಗಿ ಸರ್ವನಾಮಗಳಿಂದಲೇ ಶ್ರೀಕೃಷ್ಣನು ಆ ಪ್ರಕರಣವಲ್ಲಿ ಕೆಲಸ ಸಾಗಿಸಿರುವನು. ಕೆಲವು ಕಡೆಗೆ ಜೀವಬ್ರಹ್ಮರ ಭೇದಕ್ಕೆ (ಉದಾ—೧೩.೨೦; ೧೫.೧೬) ಅನುಕೂಲವಾದ ಸ್ಪಷ್ಟವಾದ ಶಬ್ದಪ್ರಯೋಗಗಳಿದ್ದರೆ, ಮತ್ತೆ ಕೆಲವು ಕಡೆಗೆ ಐಕ್ಯಕ್ಕೆ ಹೆಚ್ಚಿಗೆ ಅನುಕೂಲವಾದ ಶಬ್ದಪ್ರಯೋಗಗಳಿರುತ್ತವೆ. ಉದಾ- ೪.೨೪; ೫.೨೪; ೭.೮; ೧೦.೨೦; ೭.೧೯. ಒಟ್ಟಿಗೆ ಈ ವಿಷಯದಲ್ಲಿ ವಾದಕ್ಕೆ ಆಸ್ಪದವಿದೆ.

ಗೀತೆಯಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಸ್ಪಷ್ಟವಾಗಿಯೂ ಅಸಂದಿಗ್ಧವಾಗಿಯೂ ಮೇಲಿಂದ ಮೇಲೆ ಉಪದೇಶಿಸಿದುದು ಸಗುಣಭಕ್ತಿಯನ್ನು ಮಾಡಬೇಕೆಂದು, ತನ್ನನ್ನು ಪೂಜಿಸಬೇಕೆಂದು (೧೦.೯)ತನ್ನನ್ನೇ ಪಾಡಬೇಕೆಂದು (೯.೧೪). ನಾವು ಇಲ್ಲಿಂದಲೇ ಮುಂದೆ ಸಾಗಿದರೆ ತೀರಿತು. ಇಷ್ಟೇ ಅಲ್ಲ, ೧೨ ನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಸ್ಪಷ್ಟವಾಗಿ ಎಚ್ಚರಿಕೆಯನ್ನು ಕೊಟ್ಟಿರುವುದೇನೆಂದರೆ–'ಅವ್ಯಕ್ತ ಭಕ್ತಿಯ ಕಡೆಗೆ ಹೋಗಬೇಡ. ನನ್ನನ್ನು ಭಜಿಸುವುದೇ ಹೆಚ್ಚಿನದು' (೧೨.೨) ಎಂದು. ಗೀತೆಯ ಕೊನೆಯ ಉಪಸಂಹಾರದಲ್ಲಿಯೂ " ಮನಸ್ಸನ್ನು ನನ್ನಲ್ಲಿ ನೆಲಿಸು, ನನ್ನ ಭಕ್ತನಾಗು, ನನ್ನನ್ನು ಪೂಜಿಸು, ನನಗೆ ನಮಸ್ಕಾರ ಮಾಡು. ( ಹೀಗೆ ಮಾಡಿದರೆ ) ನನ್ನಲ್ಲಿಗೇ ಬರುವಿ' (೧೮.೬೫)ಎಂದು ಪ್ರತಿಜ್ಞಾಪೂರ್ವಕವಾಗಿ ಹೇಳಿರುತ್ತಾನೆ.ಶ್ರೀಕೃಷ್ಣನು ಅರ್ಜುನನಿಗೂ ಆತನನ್ನು ನಿಮಿತ್ತಮಾಡಿಕೊಂಡು ಸಕಲಲೋಕಕ್ಕೂ

ತನ್ನ ಭಕ್ತಿಯನ್ನೇ ಮಾಡಲಿಕ್ಕೆ ಹೇಳಿರುವನೆಂಬುದು ಸೂರ್ಯಪ್ರಕಾಶ ದಷ್ಟು ಸ್ಪಷ್ಟವಿರುತ್ತದೆ.

ನಾವು ನೆನಪಿನಲ್ಲಿಡತಕ್ಕ ಮತ್ತೊಂದು ಮಾತೇನೆಂದರೆ-ವೇದಾಂತ ಶಾಸ್ತ್ರವನ್ನು ನಮ್ಮ ಜನರು ಹೇಳುವ ಭಾಷಾಪದ್ಧತಿಯು ಆಧುನಿಕ ಮತ್ತು ಪಾಶ್ಚಿಮಾತ್ಯರ ಪದ್ಧತಿಯಿಂದ ತೀರಭಿನ್ನವಾಗಿರುತ್ತದೆಂಬುದು. ಈಗಿನ ಹೊಸಪದ್ಧತಿಯಲ್ಲಿ ಯಾವುಗಳನ್ನು ನಾವು ಸರ್ವವ್ಯಾಪಕ ನಿಯಮ (Laws) ಗಳೆಂದು ಅಥವಾ ತತ್ತ್ವ (Principles) ಗಳೆಂದು ಕರೆ ಯುತ್ತೇವೆಯೋ ಅವುಗಳನ್ನು ದೇವತೆಗಳೆಂದು ಸಂಬೋಧಿಸುವುದು ನಮ್ಮ ಸನಾತನಸಂಪ್ರದಾಯ. ಅದು ವಿದ್ಯುಜ್ಜನರೂಢಿ. ಉದಾ— ಗುರುತ್ವಾಕರ್ಷಣಶಕ್ತಿಯ ತತ್ತ್ವವು ಸರ್ವವ್ಯಾಪಕತತ್ತ್ವವೆಂದು ನ್ಯೂಟ ನ್ನನ ಕಾಲದಿಂದ ತಿಳಿವಳಿಕೆಯಿತ್ತಷ್ಟೆ. ಈ ನಿಯಮವನ್ನು ಹಚ್ಚುವಾಗ ಗುರುತ್ವಾಕರ್ಷಣಶಕ್ತಿಯು ಜಗತ್ತಿನ ಸಕಲ ಪದಾರ್ಥಗಳಿಗೆ ಅನ್ವಯಿ ಸುತ್ತದೆ, ಆ ತತ್ತ್ವವು ಇಡೀ ಜಗತ್ತನ್ನು ಆಳುತ್ತದೆ ಎಂದು ಈಗಿನವರು ಹೇಳುತ್ತಾರೆ. ಇದನ್ನೇ ಸನಾತನಪದ್ಧತಿಯಲ್ಲಿ ಹೇಳುವುದಾದಲ್ಲಿ, ಗುರುತ್ವಾಕರ್ಷಣವೆಂಬುದೊಂದು ಶಕ್ತಿದೇವತೆಯು ತನ್ನ ವಶದಲ್ಲಿ ಇಡೀ ಜಗತ್ತನ್ನು ಇಟ್ಟುಕೊಂಡಿರುವಳು. ಅವಳ ಸ್ವಭಾವವು ಪ್ರತಿ ಯೊಂದು ಪದಾರ್ಥದಲ್ಲಿ ಕಂಡು ಬರುತ್ತದೆ—ಎಂದು ಹೇಳುತ್ತಿದ್ದೆವು. ಪ್ರಕೃತಿಯ ಅಥವಾ ಸೃಷ್ಟಿಯ ನಿಯಮಗಳು (Laws of Nature) ಎಂದು ಈಗ ಹೇಳುತ್ತೇವೆ. ಪ್ರಕೃತಿದೇವಿಯು, ಮಹಾಲಕ್ಷ್ಮಿಯ ಶಕ್ತಿಪ್ರಭಾವವು ಎಂದು ಹಿಂದಿನವರು ಹೇಳುತ್ತಾರೆ. ಪಾಶ್ಚಿಮಾತ್ಯ ಶಿಕ್ಷಣ ಪದ್ಧತಿಯ ಪ್ರಾಬಲ್ಯದ ಮೂಲಕ ಹಳೆಯ ವಾಕ್ಪ್ರಯೋಗವು ಕಿವಿಗೆ ಹೇಗೇಗೋ ಕೇಳಿಸುತ್ತದೆ, ಮತ್ತು ಅದಕ್ಕೆ ನಾವು ನಗುತ್ತೇವೆ. ಆ ದೇವತೆ ಈ ದೇವತೆ, ಪೃಥ್ವಿದೇವತೆ, ಜಲದೇವತೆ ಗ್ರಾಮದೇವತೆ ಎಂದು ಮುಂತಾಗಿ ಹೇಳಿ ಮನಸ್ಸಿನಲ್ಲಿ ಗೊಂದಲವನ್ನೆಬ್ಬಿಸುವುದೇತ ಕ್ಕೆಂದು ಈಗಿನವರು ಕೇಳುವರು. ಆದರೆ ತುಸು ವಿಚಾರಮಾಡಿ ನೋಡಿ ದರೆ ಸನಾತನ ಪದ್ಧತಿಯೇ, ಆ ವೇದಾಂತಕ್ಕನುಸಾರವಾಗಿ, ನಿಜವಾಗಿ ಹೆಚ್ಚಿಗೆ ಶಾಸ್ತ್ರೀಯವಾದುದು, ಎಂಬುದು ಗೊತ್ತಾಗದೆ ಇರದು. ಹೀಗೆ

ತತ್ವಕ್ಕೆ ತತ್ವಾಭಿಮಾನಿ ದೇವತೆಯೆಂದು ಕರೆಯುವುದಕ್ಕೆ ಕಾರಣವೇನೆಂದರೆ ತತ್ವವೆಂಬುದು ಜಡವು; ಜಡಕ್ಕೆ ಸ್ವಂತಪ್ರೇರಣೆಯಿಲ್ಲ. ಪ್ರೇರಕ ಶಕ್ತಿಯಿರುವುದು ಚೈತನ್ಯಕ್ಕೆ, ಜಡಕ್ಕಲ್ಲ. ಸ್ವತಃ ಗುರುತ್ವಾಕರ್ಷಣ ಶಕ್ತಿಯೇ ಆಗಲಿ, ವಿದ್ಯುಚ್ಛಕ್ತಿಯೇ ಆಗಲಿ, ಅಥವಾ ಮತ್ತಾವ ಶಕ್ತಿಯೇ ಆಗಲಿ—ಅವೆಲ್ಲವೂ ಜಡ ಪದಾರ್ಥಗಳೇ. ಅವಕ್ಕೆ ಇಚ್ಛಾಶಕ್ತಿ ಕ್ರಿಯಾಶಕ್ತಿಗಳಿಂದ ಪ್ರೇರಿಸುವುದೊಂದು ಚೈತನ್ಯವು ಇರಲೇಬೇಕು. ಅದಕ್ಕೇ ಆ ದೇವತೆಯೆಂದು ಹೆಸರು. ಅದು ಆ ಜಡಶಕ್ತಿಗಳ ಆತ್ಮವು. ಆದ ಕಾರಣ, ನಮ್ಮಲ್ಲಿ ಸೂರ್ಯನು ದೇವತೆಯು, ಚಂದ್ರನು ದೇವತೆಯು, ಅವು ಸಚೇತನ ಪದಾರ್ಥಗಳು, ನಿರ್ಜೀವ ಪದಾರ್ಥಗಳಲ್ಲ. ಈ ಕಾರಣದ ಸಲುವಾಗಿಯೇ ಪ್ರಕೃತಿತತ್ವದ ಬದಲು ಮಹಾಲಕ್ಷ್ಮಿ, ಸೃಷ್ಟಿತತ್ವದ ಬದಲಾಗಿ ಬ್ರಹ್ಮ, ಸಂಹಾರ ತತ್ವದ ಬದಲಾಗಿ ರುದ್ರ ಎಂದು ಮುಂತಾದ ಶಬ್ದಪ್ರಯೋಗಗಳು ನಮ್ಮಲ್ಲಿ ರೂಢಿಯಲ್ಲಿ ಬಂದಿವೆ. ಇದನ್ನು ಲಕ್ಷ್ಯದಲ್ಲಿ ಇಟ್ಟರೆ, ನಾನಾದೇವತೆಗಳಲ್ಲಿರುವ ತಾರತಮ್ಯದ ಗೂಢವನ್ನೂ ಮಾನಸ ಶಾಸ್ತ್ರದ ಮತ್ತು ಸೃಷ್ಟಿಶಾಸ್ತ್ರದ ಸಹಾಯದಿಂದ ಬಿಡಿಸಬಹುದು. ಇರಲಿ; ಈ ಪದ್ಧತಿಯು ಆಧುನಿಕರಿಗೆ ಗೊತ್ತಿರದ್ದರಿಂದ, ಅವರ ಕಿವಿಗೆ ಅದು ಸೊಗಸುವುದಿಲ್ಲ. ಇದೇ ಕಾರಣದಿಂದ ಸರ್ವವೂ ಭಗವದಧೀನವೆಂಬುದೂ ಆಧುನಿಕ ವಾಚಕರಿಗೆ ಸೊಗಸಲಿಕ್ಕಿಲ್ಲ. ದೇವರಲ್ಲಿ ವಿಶ್ವಾಸವಿಲ್ಲದವರು ಈ ಜಗತ್ತೆಲ್ಲವೂ ಯಾವುದೋ ಒಂದು ಅಚಿಂತ್ಯವಾದ ಅಜ್ಞೇಯವಾದ, ಗೂಢವಾದ ಈಶತತ್ವ (Law of God) ಕ್ಕೆ ಒಳಪಟ್ಟಿದೆಯೆಂದೂ, ವಿಶ್ವವೆಲ್ಲವೂ ಆ ವಿಶ್ವವ್ಯಾಪಕನಿಯಮಕ್ಕೆ ಒಳಗಾಗಿದೆಯೆಂದೂ ಅಂದುಕೊಂಡು ಸಮಾಧಾನ ಮಾಡಿಕೊಂಡರೂ ಸಾಕು. ಮುಖ್ಯವಾಗಿ ತಿಳಿಯಬೇಕಾದುದೇನೆಂದರೆ ವಿಶ್ವವನ್ನಾಳುವ ಅನೇಕ ವಿಶ್ವವ್ಯಾಪಕನಿಯಮಗಳಿದ್ದು, ಆ ನಿಯಮಗಳೆಲ್ಲವನ್ನೂ ನಿಯಮನ ಮಾಡುವುದೊಂದು ಮಹಾವಿಶ್ವಶಕ್ತಿಯಿರುತ್ತದೆ. ಅದೇ ದೇವರು, ಆತನೇ ಪರಮಾತ್ಮನು. ವಿಕ್ಕ ನಿಯಮಗಳೆಲ್ಲವೂ ದೇವತೆಗಳು, ಆ ಪರಮ ಈಶ ತತ್ವವು ಪರಮದೇವತೆಯು. ಅನ್ಯದೇವತೆಗಳನ್ನು ಭಜಿಸುವುದೆಂದರೆ, ವಿಕ್ಕನಿಯಮಗಳನ್ನಷ್ಟೇ ಧ್ಯೇಯವನ್ನಾಗಿ ಇಟ್ಟುಕೊಳ್ಳುವುದು.

ಅದು ಗೌಣವು. ಹಾಗೆಯೇ ಪರಮಾತ್ಮನು ನಮ್ಮ ಬುದ್ಧಿಗೆ ನಿಲುಕದ ವಸ್ತುವು. ಆದಕಾರಣ, ಆತನನ್ನು ನಾವು ಆತನ ಮಿಕ್ಕ ಪರಿವಾರದೊಂದಿಗೆ ಪೂಜಿಸಬೇಕು; ಎಂದರೆ ಮಾತ್ರವೇ ಅದು ವಿಧಿಪೂರ್ವಕವಾದ ಪೂಜೆ. ಸಾರಾಂಶ, ಒಂದು ಬಗೆಯಿಂದ ನೋಡಿದರೆ, ಧ್ಯೇಯವೇ ದೇವರು; ಮತ್ತೊಂದು ಬಗೆಯಿಂದ ನೋಡಿದರೆ, ದೇವರೇ ಧ್ಯೇಯವು. ಪರಮಾತ್ಮನು ಪರಮಧ್ಯೇಯನು, ಆದಕಾರಣ ಪರಮದೇವರು. ಮಿಕ್ಕ ದೇವತೆಗಳೆಲ್ಲರೂ ಆತನ ದಾಸರು.

ಮೇಲಿನ ವಿವೇಚನೆಯಿಂದ, ನಮಗೆ ಮತ್ತೊ ಒಂದು ಮಾತು ಗೊತ್ತಾಗುವುದು. ಅದೇನೆಂದರೆ, ಸರ್ವವೂ ಭಗವದಧೀನವಿದೆಯೆಂದು ಬಾಯಿಯಿಂದ ಬಡಬಡಿಸುತ್ತ ಕುಳಿತುಬಿಟ್ಟರೆ ಕಾರ್ಯವಾಗಲಿಲ್ಲ. ಗುರುತ್ವಾಕರ್ಷಣದ ನಿಯಮ ಅಥವಾ ವಿದ್ಯುಚ್ಛಕ್ತಿಯ ನಿಯಮ ಇವೇ ಮುಂತಾದವುಗಳು ವಿಶ್ವನಿಯಮಗಳಲ್ಲಿ ಕೆಲವು ಎಂದು ಬಾಯಿಯಿಂದ ಜಪಮಾಡುತ್ತ ಕುಳಿತ ಮಾತ್ರಕ್ಕೆ ಹೇಗೆ ಆ ನಿಯಮಗಳ ಸರ್ವವ್ಯಾಪಿಯಾದ ಪ್ರಭಾವಗಳ ಜ್ಞಾನವಾಗುವುದಿಲ್ಲವೋ ಹಾಗೆ, ಸರ್ವವೂ ಭಗವದಧೀನವೆಂದು ಬಾಯಿಯಿಂದ ಹೇಳಿದ ಮಾತ್ರಕ್ಕೆ ಮನುಷ್ಯನು ನಿಜವಾದ ಸನಾತನಿಯೆನಿಸಲಾರನು. ಆ ನಿಯಮಗಳ ವ್ಯಾಪಕತ್ವದ ಸೂಕ್ಷ್ಮಜ್ಞಾನವು ಬೇಕು, ಅವುಗಳ ಪ್ರಭಾವಶಕ್ತಿಯಲ್ಲಿ ದೃಢವಾದ ವಿಶ್ವಾಸವು ಬೇಕು, ಅವುಗಳ ಅನುಭವವನ್ನು ಆತನು ಪ್ರತಿಕ್ಷಣಕ್ಕೆ ಪಡೆಯುತ್ತಿರಬೇಕು, ಮತ್ತು ಪ್ರತಿಯೊಂದು ಪ್ರಸಂಗದಲ್ಲಿ ಅವುಗಳನ್ನು ಹಚ್ಚಿ ತೋರಿಸುವ ಸಾಮರ್ಥ್ಯವು ಆತನಲ್ಲಿ ಇರಬೇಕು. ಹಾಗೆಯೇ ಗೀತೆಯ ಸರ್ವವೂ ಭಗವದಧೀನವೆಂಬ ತತ್ವದ ವಿಚಾರವು. ಮೇಲೆ ಹೇಳಿದಂತೆ, ಅದನ್ನು ಪ್ರತ್ಯಕ್ಷ ಆಚರಣೆಯಲ್ಲಿ ಸಾಕ್ಷಾತ್ಕರಿಸಿಕೊಂಡವನೇ ನಿಜವಾದ ಸನಾತನಿಯು, ಆತನೇ ಅಪರೋಕ್ಷಜ್ಞಾನಿಯು ಕೈವಲ್ಯ ಕಲ್ಪವಲ್ಲರಿಯಲ್ಲಿ ಹೇಳಿದ.

**ಬಾಯಬ್ರಹ್ಮನ ನುಡಿದನುಭವವಿಲ್ಲದ। ಮಾಯಾಮೋಹಿಗೆ ಮೋಕ್ಷವೆಂದಿಹುದೊ ?**
**ತಿರುಕರಂಗದ ಬೀದಿಯೊಳಗೆ ಕೂಡುತೆ ರಾಜ। ರರಮನೆಯೊಳಸುದ್ದಿಗಳ**

**ನಾಡುವಂತೆ। ಅರಿಯದೆ ಪರವಸ್ತುವಿನ ಗುರಿಯನು। ಹಿರಿಯರಾಡುವ ಮಾತು ಕಿವಿಯೊಳು ಪೇಳಿ ॥**

ಎಂಬುದನ್ನು ನಾವು ಲಕ್ಷ್ಯದಲ್ಲಿ ಇಡಬೇಕು.

ಸರ್ವವೂ ಭಗವದಧೀನವಿರುತ್ತದೆಂಬ ತತ್ತ್ವವು ಗೀತೆಯಲ್ಲಿ ಅನೇಕ ಕಡೆಗೆ ಬಂದಿದೆ. * 'ಬುದ್ಧಿ' ಎಂದರೆ ಕಾರ್ಯವಾವುದು ಅಕಾರ್ಯವಾವುದು ಎಂಬುದನ್ನು ನಿರ್ಣಯಿಸುವ ಶಕ್ತಿ, ಸಾಮಾನ್ಯಜ್ಞಾನ, ಮೋಹವಿಲ್ಲದಿರುವುದು, ಕ್ಷಮೆ, ಸತ್ಯ, ದಮ ಎಂದರೆ ಇಂದ್ರಿಯನಿಗ್ರಹ, ಶಮ ಎಂದರೆ ಭಗವನ್ನಿಷ್ಠಬುದ್ಧಿ, ಸುಖ, ದುಃಖ, ಹುಟ್ಟು, ಇರುವಿಕೆ, ಭಯ, ಅಭಯ, ಅಹಿಂಸೆ, ಸಮತೆ, ತುಷ್ಟಿ, ತಪ, ದಾನ, ಯಶ, ಅಯಶ—ಇವೇ ಮುಂತಾದ, ಪ್ರಾಣಿಗಳಲ್ಲಿರುವ ಬೇರೆಬೇರೆಯಾದ ನಾನಾಧರ್ಮಗಳೆಲ್ಲವೂ ನನ್ನಿಂದಲೇ ಉಂಟಾಗಿರುತ್ತವೆ, ಎಂದರೆ ಪ್ರಾಣಿಗಳಿಗೆ ಇವೆಲ್ಲ ಧರ್ಮಗಳನ್ನು ಕೊಡುವವನು ನಾನೇ; ಇಷ್ಟೇ ಅಲ್ಲ, ಇವೆಲ್ಲ ಪ್ರಾಣಿಗಳೂ ನನ್ನಿಂದಲೇ ಹುಟ್ಟಿದವುಗಳು (೧೦.೪). ಮೊದಲಿನ ಮನ್ವಂತರದ ಸಪ್ತಋಷಿಗಳು ಮತ್ತು ಯಾರಿಂದ, ಈ ಲೋಕದ ಯಾವತ್ತು ಪ್ರಜೆಗಳು ಹುಟ್ಟಿರುವರೋ ಆ ನಾಲ್ಕು ಮನುಗಳು – ಇವರೆಲ್ಲರೂ ನನ್ನಿಂದಲೇ ಹುಟ್ಟಿದ ಮಾನಸಪುತ್ರರು (೧೦.೫), ಎಂದರೆ ಮೇಲೆ ಕಾಣಿಸಿದ ವಿಶೇಷ ಸೃಷ್ಟಿಗೂ ನಾನೇ ಕಾರಣನು. ಸಾರಾಂಶ, ನಾನೇ ಸರ್ವಕರ್ತೃವು ಎಂದೂ ನಾನೇ ಎಲ್ಲರ ಹುಟ್ಟಿಗೂ ಕಾರಣನು, ನನ್ನಿಂದಲೇ ಎಲ್ಲವೂ ನಡೆಯಿಸಲ್ಪಟ್ಟಿದೆ (೧೦.೬) ಎಂದೂ ಹೇಳಿರುವನು. ಯಜ್ಞತಪಸ್ಸುಗಳ ಫಲವನ್ನು ಉಣ್ಣುವವನೂ ಎಲ್ಲ ಲೋಕಗಳಿಗೆ ಮಹೇಶ್ವರನೂ ಅವನು, (೫.೨೯). ಎಲ್ಲ ಪ್ರಾಣಿಗಳ ಹುಟ್ಟುವಿಕೆಗೂ ಆತನ ಅಧೀನದಲ್ಲಿರುವ ಪರ ಮತ್ತು ಅಪರ ಪ್ರಕೃತಿಗಳೇ ಕಾರಣಗಳೆಂದೂ (೭.೬) ಇಡೀ ಜಗತ್ತಿನ ಹುಟ್ಟುಸಾವುಗಳಿಗೆ ತಾನೇ ಕಾರಣನೆಂದೂ ಆತನು ಉಸುರಿರುವನು (೯.೧೦). ಮತ್ತು ತಾನು ಸರ್ವವ್ಯಾಪಿಯೆಂದೂ ಈ ಜಗತ್ತೆಲ್ಲವೂ ಕಣ್ಣಿಗೆ ಕಾಣದ ತನ್ನ ರೂಪದಿಂದ ತುಂಬಿದೆಯೆಂದೂ ಜಡಜೀವ

---

* ಸರ್ವವೂ ಭಗವದಧೀನವೆಂಬುದಕ್ಕೆ ಆಧಾರಗಳು: ೧೦–೪; ೧೦–೫; ೧೦–೬; ೧೦–೮ ೫–೨೯; ೭–೬; ೯–೪; ೯–೫; ೯–೬; ೧೪–೩; ೧೪–೪; ೧೪–೨೭; ೧೫–೧೮.

ಪದಾರ್ಥಗಳೆಲ್ಲವೂ ತನ್ನಲ್ಲಿ ಇರುವವಲ್ಲದೆ, ತಾನು ಅವುಗಳ ಅಧೀನದಲ್ಲಿ ಇಲ್ಲವೆಂದೂ ತನ್ನ ಪ್ರಭಾವವನ್ನು ವರ್ಣಿಸಿಕೊಂಡಿರುವನು (೭.೧೨). ಹಾಗೆಯೇ, ಅವು ತನ್ನನ್ನು ಆಶ್ರಯಿಸಿಕೊಂಡಿದ್ದ ಮಾತ್ರಕ್ಕೆ ತನ್ನಲ್ಲಿದ್ದ ಗುಣಧರ್ಮಗಳು ಅವುಗಳಲ್ಲಿಯೂ ಅವುಗಳಲ್ಲಿದ್ದ ಗುಣಧರ್ಮಗಳು ತನ್ನಲ್ಲಿಯೂ ಸೇರುತ್ತವೆಂದು ಮಾತ್ರ ತಿಳಿಯಕೂಡದೆಂದು ಎಚ್ಚರಿಕೆಯನ್ನು ಕೊಟ್ಟಿರುವನು (೯.೪). ಇದೇ ಆ ಪರಮಾತ್ಮನ ಸಾಮರ್ಥ್ಯ ವಿಶೇಷವು. ತಾನು ಭೂತಗಳನ್ನೇನೋ ಧಾರಣಮಾಡಿರುವನು, ಆದರೆ ತಾನು ಭೂತಸ್ಥನಾಗಿರುವುದಿಲ್ಲ (೯.೫). ಇದು ಹೇಗೆ ಸಂಭವನೀಯವೆಂಬುದನ್ನು ಗಾಳಿಯ ಉದಾಹರಣೆಯನ್ನು ಕೊಟ್ಟು ಮನವರಿಸಲೆತ್ನಿಸಿರುವನು. ಯಾವಾಗಲೂ ಎಲ್ಲೆಡೆಯಲ್ಲಿಯೂ ತುಂಬಿರುವ ಮಹಾವಾಯುವು ಆಕಾಶದಲ್ಲಿ ಇರುವಂತೆ ಸರ್ವ ಚರಾಚರ ಪದಾರ್ಥಗಳೆಲ್ಲವೂ ಆತನಲ್ಲಿ ಇವೆ; ಎಂದರೆ ಹೇಗೆ ಆಕಾಶಕ್ಕೆ ಗಾಳಿಯ ಲೇಪವಿಲ್ಲವೋ ಮತ್ತು ಗಾಳಿಗೆ ಆಕಾಶದ ಲೇಪವಿಲ್ಲವೋ ಹಾಗೆ ಆತನ ಗುಣಧರ್ಮಗಳು ಪದಾರ್ಥಗಳಲ್ಲಿ ಸೇರುವುದಿಲ್ಲ, ಅವುಗಳ ಗುಣಧರ್ಮಗಳು ಆತನನ್ನು ಸೋಂಕುವುದಿಲ್ಲ (೯.೬). ಆತನು ಮತ್ತೂ ಹೇಳುವುದೇನೆಂದರೆ "ಮಹತ್ತಾದ ಆ ಚಿತ್ ಪ್ರಕೃತಿಯು ಎಂದರೆ ಮಹಾಲಕ್ಷ್ಮಿಯು ನನ್ನ ಹೆಂಡತಿಯು, ಅವಳಲ್ಲಿ ನಾನು ಗರ್ಭವನ್ನಿಡುತ್ತೇನೆ" (೧೪.೩). ನಾನೂ ಅವಳೂ ಆದಿಸೃಷ್ಟಿಗೆ ಮಾತ್ರವೇ ಕಾರಣರೆಂತಲ್ಲ, ಪ್ರತಿಯೊಂದು ಸಲ, ಪ್ರಾಣಿಗಳು ಹುಟ್ಟುವುದಕ್ಕೆ ನಾವೇ ಕಾರಣರು. ಸರ್ವಯೋನಿಗಳಲ್ಲಿ ಹುಟ್ಟುವ ಮೂರ್ತಿಗಳಿಗೆಲ್ಲ ಅಂದರೆ ಶರೀರಗಳಿಗೆಲ್ಲ ಚಿತ್ ಪ್ರಕೃತಿಯು ಕ್ಷೇತ್ರಳು, ನಾನು ಬೀಜವನ್ನಿಡುವ ತಂದೆಯು. ಎಂದರೆ ಪ್ರಾಣಿಗಳು ಹುಟ್ಟುವುದಕ್ಕೆ ನಾವಿಬ್ಬರೇ ನಿಜವಾದ ಕಾರಣರು (೧೪:೪). ನಾನು ಮಹಾಲಕ್ಷ್ಮಿಗೂ ನಾಶರಹಿತವಾದ ಮೋಕ್ಷಕ್ಕೂ ಶಾಶ್ವತವಾದ ಧರ್ಮಕ್ಕೂ ಅತ್ಯಂತವಾದ ಸುಖಕ್ಕೂ ಆಶ್ರಯನು (೧೪.೨೭). ಜಗತ್ತಿನಲ್ಲಿ ಪುರುಷರು ಇಬ್ಬರು, (೧) ಕ್ಷರಪುರುಷ, (೨) ಅಕ್ಷರಪುರುಷ. ನಾಶವಂತವುಳ್ಳ ಪ್ರಾಣಿಗಳಿಗೆಲ್ಲರಿಗೂ ಕೂಡಿ ಕ್ಷರಪುರುಷರೆಂದು ಹೆಸರು, ಕೂಟಸ್ಥಳಾದವಳು ಎಂದರೆ ಆಕಾಶದಂತೆ ನಿರ್ಲೇಪಳಾಗಿರುವ ಚಿತ್

ಪ್ರಕೃತಿಯು ಅಕ್ಷರಪುರುಷಳೆನಿಸುತ್ತಾಳೆ (೧೫.೧೬). ಇವರಿಬ್ಬರಲ್ಲದೆ ಮೂರನೆಯವನೊಬ್ಬ ಉತ್ತಮಪುರುಷನು ಇರುತ್ತಾನೆ. ಆತನಿಗೆ ಪರಮಾತ್ಮನೆಂದು ಹೆಸರು (೧೫.೧೭). ಆ ನಾಶರಹಿತನಾದ ಈಶ್ವರನು ಈ ಮೂರುಲೋಕಗಳಲ್ಲಿ ಪ್ರವೇಶಿಸಿ, ಅವುಗಳನ್ನು ಧಾರಣಮಾಡುತ್ತಾನೆ– ಎಂದು ಮುಂತಾಗಿ ಅನೇಕ ಶ್ಲೋಕಗಳಲ್ಲಿ ಹೇಳಿರುವುದರಿಂದ, ಸರ್ವವೂ ಭಗವದಧೀನವೆಂಬುದು ಸಿದ್ಧವಾಗಲಿಲ್ಲವೆ?

ಅದೇ ಸೊರಗೆ ಆತನು ಸರ್ವೋತ್ತಮನು,* ಸರ್ವಗುಣಪೂರ್ಣನು ಇವೇ ಮುಂತಾದವುಗಳೂ ಗೀತೆಯ ಕೆಲವು ಶ್ಲೋಕಗಳಿಂದ ಸ್ಪಷ್ಟವಾಗುತ್ತವೆ. ಉದಾ:—ಸುರಗಣಗಳೂ ಮಹರ್ಷಿಗಳೂ ಕೂಡ ನನ್ನ ಪ್ರಭಾವವನ್ನರಿಯರು. ಏಕೆಂದರೆ ನಾನು ದೇವತೆಗಳಿಗಿಂತಲೂ ಮಹರ್ಷಿಗಳಿಗಿಂತಲೂ ಆದಿಯು (೧೦.೨) ಎಂಬಲ್ಲಿ ಆದಿಯು ಎಂಬುದರಿಂದ ಆತನ ಸರ್ವೋತ್ತಮತ್ವವು ಗೊತ್ತಾಗುತ್ತದೆ. ಏಕೆಂದರೆ ಆದಿಯು ಎಂದರೆ ಪ್ರಧಾನನು ಎಂದರೆ ಸರ್ವೋತ್ತಮನು ಎಂದು ಅರ್ಥ. ಮುಂದೆಯೇ ೧೦.೩ ರಲ್ಲಿ ತಾನು ಲೋಕಮಹೇಶ್ವರನೆಂದು ಹೇಳಿಕೊಂಡಿರುವನು. ಅದರಿಂದಲೂ ಆತನು ಸರ್ವೋತ್ತಮನೆಂಬುದು ಗೊತ್ತಾಗುತ್ತದೆ. ೭.೭ ರಲ್ಲಿ 'ನನಗಿಂತ ಹೆಚ್ಚಿನವರಾರೂ ಇಲ್ಲ. ದಾರದಲ್ಲಿ ಮಣಿಗಳು ಪೋಣಿಸಲ್ಪಟ್ಟಂತೆ ನನ್ನಲ್ಲಿ ಇವೆಲ್ಲವೂ ಪೋಣಿಸಲ್ಪಟ್ಟಿವೆ'' ಎಂದು ತನ್ನ ಸರ್ವೋತ್ತಮತ್ವವನ್ನು ಪುನಃ ಸ್ಪಷ್ಟವಾಗಿಯೇ ಹೇಳಿರುವನು. ೧೧–೪೩ ರಲ್ಲಿ ಅರ್ಜುನನು ಆತನನ್ನು ಸರ್ವೋತ್ತಮನೆಂದೇ ಸ್ತುತಿಮಾಡಿದ್ದಾನೆ. ನೀನು ಚರಾಚರ ಲೋಕದ ತಂದೆಯು, ಪೂಜ್ಯನು, ಬಲು ದೊಡ್ಡ ಗುರುವು; ಎಲೈ ಅಪ್ರತಿಮಪ್ರಭಾವನೇ ಮೂರೂ ಲೋಕಗಳಲ್ಲಿ ನಿನಗೆ ಸರಿಯಾದವರು ಕೂಡ ಇಲ್ಲ, ಎಂದ ಬಳಿಕ ನಿನಗಿಂತ ಹೆಚ್ಚಿನವರು ಎಲ್ಲಿಂದ ಬರಬೇಕು – ಎಂದು ಸ್ತುತಿಸಿರುವನು. ೧೫.೧೮ ರಲ್ಲಂತೂ ''ಹೀಗೆ ಕ್ಷರಾಕ್ಷರಗಳನ್ನು ವಿಚಾರಿದವನಾದುದರಿಂದಲೂ, ಅಕ್ಷರಕ್ಕಿಂತಲೂ ಉತ್ತಮನಾದುದರಿಂದಲೂ ಲೋಕದಲ್ಲಿಯೂ ವೇದಗಳಲ್ಲಿಯೂ ಪುರುಷೋತ್ತಮನೆಂದು ಪ್ರಸಿದ್ಧಿಯನ್ನು

* ಸರ್ವೋತ್ತಮತ್ವಕ್ಕೆ ಶ್ಲೋಕಗಳು:— ೧೦. ೨; ೧೦. ೩; ೭. ೭; ೧೧. ೪೩; ೧೫. ೧೮

ಹೊಂದುವರುವೆನು.” ಎಂದು ಸ್ಪಷ್ಟವಾಗಿ ಹೇಳಿರುವನು. ಇದಲ್ಲದೆ ೭.೪೫ ರಲ್ಲಿ ಬುದ್ಧಿಗೇಡಿಗಳು ತನ್ನ ಪರಮಭಾವ ಮತ್ತು ನಾಶರಹಿತವಾದ ಸರ್ವೋತ್ತಮ ಸ್ವರೂಪವನ್ನರಿಯುವುದಿಲ್ಲವೆಂದೂ ೯.೧೧ರಲ್ಲಿ ಮೂಢರು ತನ್ನ ಅಪ್ರಮೇಯವಾದ ಇರುವ ಭೂತಮಹೇಶ್ವರನಾದ ಉತ್ಕೃಷ್ಟಭಾವವನ್ನರಿಯ ರೆಂದೂ ತನ್ನ ಸರ್ವೋತ್ತಮತ್ವವನ್ನು ಹೇಳಿಕೊಂಡಿರುವನು.

ಭಗವಂತನು ಸರ್ವಗುಣಪೂರ್ಣ* ನೆಂಬುದಕ್ಕೂ ಆಧಾರಗಳಿರುವುವು. ೧೦.೭ ರಲ್ಲಿ ತನ್ನ ವಿಭೂತಿಗಳನ್ನೂ ಯೋಗವನ್ನೂ ಎಂದರೆ ನಾನಾ ಸ್ವರೂಪಗಳನ್ನು ಯಥಾರ್ಥವಾಗಿ ತಿಳಿದವನು ನಿಶ್ಚಲವಾದ ಧ್ಯಾನಯೋಗದಿಂದ ಕೂಡಿದವನಾಗುತ್ತಾನೆ’-ಎಂದು ಹೇಳಿರುವುದರಿಂದ ಆತನು ಅನಂತ ವಿಭೂತಿ ರೂಪಗಳುಳ್ಳವನೆಂಬುದೂ ಆತನ ಸಾಮರ್ಥ್ಯವು ಅಗಾಧವಾದುದೆಂಬುದೂ ಗೊತ್ತಾಗುತ್ತದೆ. ಇದರಿಂದ ಆತನು ಸರ್ವಗುಣಪರಿಪೂರ್ಣನೆಂಬ ಅನುಮಾನವು ಹೊರಡುತ್ತದೆ. ೩.೨೨ ರಲ್ಲಿ ಮೂರು ಲೋಕಗಳಲ್ಲಿಯೂ ನನಗೆ ಮಾಡಬೇಕಾದುದಾಗಲಿ, ಗಳಿಸದೆ ಇರುವುದಾಗಲಿ, ಗಳಿಸಬೇಕಾದುದಾಗಲಿ ಏನೂ ಇಲ್ಲವೆಂದು ತನ್ನ ಗುಣಪೂರ್ಣತ್ವವನ್ನು ಹೇಳಿರುವನು.

ಆತನು ನಿರ್ದೋಷನು ಅಥವಾ ಸರ್ವದೋಷವರ್ಜಿತ†ನೆಂಬುದಕ್ಕೆ ೧೦.೩ ಮತ್ತು ೯.೪ ಇವು ಆಧಾರಗಳು. ೧೦.೩ ರಲ್ಲಿ ತಾನು ಅಜನೂ ಅನಾದಿಯೂ ಎಂದು ಹೇಳಿರುವನು. ಇದರಿಂದ ಆತನು ನಿರ್ದೋಷನೆಂಬುದು ಗೊತ್ತಾಗುತ್ತದೆ. ಏಕೆಂದರೆ ಜನ್ಮಮರಣಗಳು ದೊಡ್ಡ ದೋಷಗಳು. ಅಜ ಎಂದರೆ ಜನನಾವಸ್ಥೆಯ ಅಭಾವ, ಇದರಿಂದ ಮರಣಾವಸ್ಥೆಯ ಅಭಾವವೂ ಅರ್ಥಾತ್ ಗೊತ್ತಾಗುತ್ತದೆ.

ಮೋಕ್ಷವು ಆತನ ಅಧೀನವಾದ ವಸ್ತುವು ಎಂಬುದಕ್ಕೂ ಅನೇಕ ಆಧಾರಗಳುಂಟು.† ೧೦.೩ ರಲ್ಲಿ ಯಾವನು ಆತನು ಹುಟ್ಟಿಲ್ಲದವನೆಂದು ಮುಂತಾಗಿ ತಿಳಿಯುವನೋ ಆತನು ಸರ್ವ ಪಾಪಗಳಿಂದ ಮುಕ್ತನಾಗುತ್ತಾನೆ, ಎಂದರೆ ತನ್ನ ಜ್ಞಾನಕ್ಕೆ ಮೋಕ್ಷವೇ ಫಲವೆಂದು ಹೇಳಿರುವನು.

---

* ಸರ್ವಗುಣಪೂರ್ಣತ್ವಕ್ಕೆ:— ೧೦.೭; ೩.೨೨ ನಿರ್ದೋಷತ್ವಕ್ಕೆ:— ೧೦.೩; ೯.೪

† ಮೋಕ್ಷಪ್ರದತ್ವಕ್ಕೆ:— ೧೦,೩; ೭೦.೭; ೧೦.೮; ೧೨.೭; ೯.೧೦; ೧೪.೭

ಹಾಗೆಯೇ ೧೦.೭ ರಲ್ಲಿ ತನ್ನ ವಿಭೂತಿ ಮತ್ತು ಯೋಗವನ್ನು ತಿಳಿದವನು ಅವಿಕಂಪವಾದ ಯೋಗದಿಂದ ಯುಕ್ತನಾಗುತ್ತಾನೆಂದು ಹೇಳಿದೆ, ಅವಿಕಂಪವಾದ ಯೋಗವೆಂದರೆ ಮುಕ್ತಿ. ೧೦.೧೦ ರಲ್ಲಿ ಸತತವಾಗಿ ನನ್ನನ್ನು ಧ್ಯಾನ ಮಾಡುವವರಿಗೆ ನಾನು ಬುದ್ಧಿಯೋಗವನ್ನು ಕೊಡುತ್ತೇನೆ ಅದರಿಂದ ಅವರು ನನ್ನೆಡೆಗೆ ಬರುತ್ತಾರೆಂದು ಹೇಳಿರುವನು. ೧೨.೭ ರಲ್ಲಿ ನನ್ನಲ್ಲಿ ಚಿತ್ತವನ್ನಿಟ್ಟವರನ್ನು ನಾನು ಬಲು ಬೇಗನೆ ಈ ಮೃತ್ಯುಸಂಸಾರ ಸಾಗರದಿಂದ ಸಂರಕ್ಷಿಸುತ್ತೇನೆ, ಎಂದರೆ ಮುಕ್ತಿಯನ್ನು ಕೊಡುತ್ತೇನೆ ಎಂದು ಹೇಳಿರುವನು. ೯.೧ ರಲ್ಲಿ ಜ್ಞಾನವಿಜ್ಞಾನಗಳನ್ನರಿತವನು ಅಶುಭದಿಂದ ಎಂದರೆ ಅಶುಭವಾದ ಸಂಸಾರದಿಂದ ಪಾರಾಗುವನೆಂದು ಹೇಳಿದೆ. ೧೪.೨೭ ರಲ್ಲಿ ನಾಶರಹಿತವಾದ ಮೋಕ್ಷಕ್ಕೆ ತಾನೇ ಆಶ್ರಯವೆಂದು ಹೇಳಿರುವನು.

ಇದೇ ರೀತಿಗೆ ಆತನು ಸೃಷ್ಟಿಸ್ಥಿತಿಲಯಗಳ ಕರ್ತನೆಂಬುದಕ್ಕೂ ಸರ್ವಜ್ಞನೆಂಬುದಕ್ಕೂ ಅನೇಕ ಶ್ಲೋಕಗಳ ಆಧಾರವನ್ನು ಕೊಡಬಹುದು.‡ ೪.೧೩ ರಲ್ಲಿ ಅವರವರ ಗುಣಕರ್ಮಗಳಿಗನುಸಾರವಾಗಿ ನಾಲ್ಕು ವರ್ಣಗಳನ್ನು ಹುಟ್ಟಿಸಿರುವೆನೆಂದೂ, ೭.೬ ರಲ್ಲಿ ಇಡೀ ಜಗತ್ತಿನ ಹುಟ್ಟುಸಾವುಗಳಿಗೆ ನಾನೇ ಕಾರಣನೆಂದೂ, ೭.೧೨ ರಲ್ಲಿ ಸಾತ್ತ್ವಿಕ ರಾಜಸ ತಾಮಸ ವಸ್ತುಗಳೆಲ್ಲವೂ ನನ್ನಿಂದಲೇ ಹುಟ್ಟಿರುವವೆಂದೂ, ೮.೧೮ ರಲ್ಲಿ ಹಗಲು ಬಂದಾಗ ಪರಮಾತ್ಮನಿಂದ ಯಾವತ್ತು ವ್ಯಕ್ತ ಪದಾರ್ಥಗಳು ಹುಟ್ಟುತ್ತವೆಂದೂ, ರಾತ್ರಿಯಲ್ಲಿ ಪುನಃ ಆತನಲ್ಲಿಯೇ ಲೀನವಾಗುತ್ತವೆಂದೂ ೯.೭ ರಲ್ಲಿ ಪ್ರಳಯಕಾಲದಲ್ಲಿ ಎಲ್ಲ ವಸ್ತುಗಳು ತನ್ನ ತ್ರಿಗುಣಾತ್ಮಕವಾದ ಪ್ರಕೃತಿಯಲ್ಲಿ ಬಂದು ಸೇರುತ್ತವೆಂದೂ, ಸೃಷ್ಟಿ ಕಾಲಕ್ಕೆ ಪುನಃ ತಾನು ಅವುಗಳನ್ನು ಹೊರಗೆಡಹುವನೆಂದೂ ೯.೧೮ ರಲ್ಲಿ ಹುಟ್ಟಿಸುವವನೂ ಕೊಲ್ಲುವವನೂ ತಾನೇ ಎಂದೂ ೧೦.೮ ರಲ್ಲಿ ತಾನೇ ಎಲ್ಲರ ಹುಟ್ಟಿಗೂ ಕಾರಣನೆಂದೂ ಹೇಳಿರುವನು. ೧೧.೨ ರಲ್ಲಿ ಅರ್ಜುನನು ಪ್ರಾಣಿಗಳ ಹುಟ್ಟು ಹೋಗುಗಳನ್ನು ಆತನಿಂದ ಕಲಿತನೆಂದು ಹೇಳಿ

‡ ಸೃಷ್ಟಿಸ್ಥಿತಿಲಯಗಳ ಕರ್ತೃತ್ವಕ್ಕೆ:— ೪.೧೩; ೭.೬; ೭.೧೨; ೮.೧೮; ೯.೭; ೯.೧೮; ೧೦.೮; ೧೧.೪೧ ೧೧.೪೩; ೧೩.೧೬; ೧೪.೪; ಸರ್ವಜ್ಞತ್ವಕ್ಕೆ, ೪.೫; ೭.೨೬

ದ್ದಾನೆ. ೧೧.೪೧ ರಲ್ಲಿ ಅರ್ಜುನನು ಪರಮಾತ್ಮನನ್ನು ಚರಾಚರ ಲೋಕದ ತಂದೆಯೆಂದು ಹೊಗಳಿದ್ದಾನೆ. ೧೧.೪೩ ರಲ್ಲಿ ಆತನು ಪ್ರಾಣಿಗಳನ್ನು ಧಾರಣ ಮಾಡುವವನೆಂಬುದನ್ನೂ ಸುಂಗುವವನೆಂಬುದನ್ನೂ ತಿಳಿದಿರ ಬೇಕೆಂದೂ ೧೪.೪ ರಲ್ಲಿ ಸರ್ವಪ್ರಾಣಿಗಳಿಗೂ ತಾನು ತಂದೆಯೂ ಚಿತ್ಪ್ರಕೃತಿಯೂ ತಾಯಿಯೂ ಎಂದೂ ಹೇಳಿರುವನು. ಇವೇ ಮುಂತಾದ ಅನೇಕ ಶ್ಲೋಕಗಳಿಂದ, ಆತನು ಸೃಷ್ಟಿಪ್ರಲಯಗಳ ಕರ್ತನೆಂಬುದು ಗೊತ್ತಾಗುತ್ತದೆ.

ತನ್ನ ಹಿಂದಿನ ಜನ್ಮಗಳೆಲ್ಲವನ್ನೂ ಅರ್ಜುನನು ಅರಿಯದಿದ್ದರೂ ಪರಮಾತ್ಮನಿಗೆ ತನ್ನ ಹಿಂದಿನ ಜನ್ಮಗಳೆಲ್ಲವೂ ಗೊತ್ತಿರುವವು (೪.೪) ಎಂದೂ 'ಹಿಂದೆ ಇದ್ದ, ಇಂದು ಇರುವ, ಮುಂದೆ ಆಗುವ ಎಲ್ಲ ಪ್ರಾಣಿಗಳನ್ನು ನಾನು ಬಲ್ಲೆನು'' (೭.೨೬) ಎಂದೂ ಹೇಳಿರುವುದರಿಂದ ಆತನ ಸರ್ವಜ್ಞತ್ವವು ಗೊತ್ತಾಗುತ್ತದೆ.

ಒಟ್ಟಿಗೆ, ಗೀತೆಯಲ್ಲಿ ಹೇಳಿರುವ ಯಾವತ್ತು ಜ್ಞಾನದ ಸಾರವೆಂದರೆ ಸರ್ವವೂ ಭಗವದಧೀನವಿರುತ್ತದೆಂಬುದು.

---

## ೮ನೆಯ ಪ್ರಕರಣ

# ಸ್ವವಿಹಿತವೃತ್ತಿಯೆಂದರೇನು ?

**ವಿಷಯದ ವಿಚಾರವ ಬಿಡು ।**
**ವಿಹಿತಕರ್ಮವ ಮಾಡು ।**
**ವೈರಾಗ್ಯಭಾಗ್ಯ ಬೇಡು ॥**

**—ಪುರಂದರದಾಸರು**

ಪರಮಧರ್ಮಕ್ಕೆ ಅಗತ್ಯವಿರುವ ''ಸರ್ವವೂ ಭಗವದಧೀನ''ವೆಂಬ ಜ್ಞಾನವನ್ನು ಕುರಿತು ಹೋದ ಪ್ರಕರಣದಲ್ಲಿ ವಿಸ್ತರಿಸಿದೆವಷ್ಟೆ. ಈ ಪ್ರಕರಣದಲ್ಲಿ, ಅದರ ಮತ್ತೊಂದು ಅಂಗವಾದ ಸ್ವವಿಹಿತವೃತ್ತಿಯೆಂದರೇನೆಂಬುದನ್ನು ವಿವೇಚಿಸುವೆವು.

ಸ್ವವಿಹಿತ ವೃತ್ತಿಯೆಂದರೆ ತನಗೆ ಉಚಿತವಾದ ಕಾರ್ಯ. ಇದಕ್ಕೇ ಗೀತೆಯಲ್ಲಿ ಸ್ವಧರ್ಮ, ನಿಯತ ಕರ್ಮ, ಸ್ವಭಾವಜ ಕರ್ಮ ಮುಂತಾದ ಪರ್ಯಾಯ ಹೆಸರುಗಳಿರುತ್ತವೆ. ಕರ್ಮವೆಂದೊಡನೆ ಬಾಹ್ಯ ಕರ್ಮದ ಕಡೆಗೆ ಜನರ ಮನಸ್ಸು ಹೋಗುತ್ತದೆ. ಆದರೆ, ಬಾಹ್ಯಕರ್ಮಕ್ಕೆ ಮಾತ್ರವೇ ಗೀತೆಯು ಕರ್ಮವೆನ್ನುವುದಿಲ್ಲ. ಮಾನಸಿಕ, ವಾಚಿಕ, ಮುಂತಾದ ಎಲ್ಲ ಕರ್ಮಗಳಿಗೂ ಅದು ಕರ್ಮವೆನ್ನುತ್ತದೆ. ಅವರವರ ಸ್ವಭಾವದ ಪ್ರಕಾರ, ಕೆಲವರಲ್ಲಿ ಬಾಹ್ಯ ಕರ್ಮವು ಸಂಕೋಚವಾಗಿರುತ್ತದೆ, ಕೆಲವರಲ್ಲಿ ಅದು ಹೆಚ್ಚಾಗಿ ಇರುತ್ತದೆ. ಕೇವಲ ಕಣ್ಣಿಗೆ ಕಾಣುವ ಬಾಹ್ಯ ಕರ್ಮಗಳ ವಿಸ್ತಾರವನ್ನು ಬೆಳಿಸಿದವರಿಗೇ ಕರ್ಮಯೋಗಿಗಳೆನ್ನುವ ರೂಢಿಯಿರುವುದು.ಆದರೆ ಪರಮಾತ್ಮನ ಧ್ಯಾನದಲ್ಲಿ ಸದಾ ನಿಮಗ್ನನಾದವನೂ, ಜ್ಞಾನ ದಾನದಲ್ಲಿ ಎಂದರೆ ಅಧ್ಯಯನ ಪ್ರವಚನಾದಿಗಳಲ್ಲಿ ನಿಮಗ್ನನಾದವನೂ ಕರ್ಮಯೋಗಿಯೇ. ಜ್ಞಾನದ ಪ್ರಾಬಲ್ಯವಿದ್ದಲ್ಲಿ ಅವರಿಗೆ ಜ್ಞಾನಯೋಗಿಗಳೆಂದೂ ಕರೆಯುವುದುಂಟು. ಆದರೆ, ಅಂಥವರಲ್ಲಿ ಕರ್ಮವು ಇರುವುದಿಲ್ಲವೆಂತಲ್ಲ. ಕರ್ಮದ ಪ್ರಮಾಣಕ್ಕಿಂತ ಜ್ಞಾನದ ಪ್ರಮಾಣವು ಹೆಚ್ಚಾಗಿರುತ್ತದೆ. ಮತ್ತು ಆ ಜ್ಞಾನವು ಅಧ್ಯಾಪನ, ಕೀರ್ತನ, ಪ್ರವಚನ, ಗ್ರಂಥಕರ್ತೃತ್ವ ಮುಂತಾದ ರೂಪಗಳಲ್ಲಿ ಹೊರ ಬೀಳುತ್ತದೆ. ರೂಢಿಯಲ್ಲಿ ಯಾವ ಶಬ್ದವನ್ನು ಪ್ರಯೋಗಿಸಿದರೂ ಅಷ್ಟೇ. ಮುಖ್ಯವಾಗಿ ನೆನಪಿನಲ್ಲಿಡತಕ್ಕ ಮಾತೇನೆಂದರೆ, ಪ್ರತಿಯೊಬ್ಬನು ತನಗೆ ಯೋಗ್ಯವಾದ ಕರ್ಮದಲ್ಲಿ – ಆ ಬಳಿಕ ಅದು ಬಾಹ್ಯಕರ್ಮವೇ ಇರಲಿ, ಅಥವಾ ಧ್ಯಾನ ಮೊದಲಾದ ಆಂತರಿಕ ಕರ್ಮವೇ ಇರಲಿ–ತೊಡಗಿರಬೇಕೆಂಬುದೇ ಮುಖ್ಯ ತತ್ವ. ಆದಕಾರಣವೇ ಸ್ವವಿಹಿತ **ಕರ್ಮ**ವೆಂಬ ಸಂದಿಗ್ಧ ಶಬ್ದವುಪಯೋಗಿಸಲ್ಪಡದೆ, ಸ್ವವಿಹಿತ ವೃತ್ತಿಯೆಂಬ ಶಬ್ದವು ಉಪಯೋಗಿಸಲ್ಪಟ್ಟಿದೆ. ಕರ್ಮ ಶಬ್ದದ ವ್ಯಾಪಕಾರ್ಥವನ್ನು ಲಕ್ಷ್ಯದಲ್ಲಿಟ್ಟರೆ, ಸ್ವವಿಹಿತಕರ್ಮವೆನ್ನಲೂ ಅಡ್ಡಿ ಇಲ್ಲ. ಇರಲಿ.

ಸ್ವವಿಹಿತ ವೃತ್ತಿಯೆಂದರೆ ತನ್ನ ಮೂಲಸ್ವಭಾವಕ್ಕೆ ಅನುಗುಣವಾದ ಉದ್ಯೋಗ. ತನ್ನ ಮೂಲ ಸ್ವಭಾವವು ಬೀಜವಿದ್ದಂತೆ. ಅದಕ್ಕೆ ತಕ್ಕ ಗೊಬ್ಬರ ನೀರು ಮುಂತಾದವುಗಳನ್ನು ಹಾಕಿದರೆ, ಅದು ಪುಷ್ಟ

ವಾಗಿ ಬೆಳೆದು ಪರಿಪಕ್ವವಾದ ಫಲಗಳನ್ನು ಕೊಡುತ್ತದೆ. ಹಾಗಿಲ್ಲದೆ, ಅದಕ್ಕೆ ತಕ್ಕುದಲ್ಲದ ಗೊಬ್ಬರವನ್ನು ಹಾಕಿದರೆ ಅದು ಚೆನ್ನಾಗಿ ಫಲಿಸುವುದಿಲ್ಲ. ಆದಕಾರಣ, ನಾವು ನಮ್ಮ ಮೂಲಸ್ವಭಾವವನ್ನು ಕಂಡು ಹಿಡಿದು, ಸತ್ಸಂಗ, ಸದ್ವಿದ್ಯೆ ಮುಂತಾದವುಗಳಿಂದ, ಅದನ್ನು ಚೆನ್ನಾಗಿ ವಿಕಾಸಗೊಳಿಸಬೇಕೆಂಬುದು ಮೊದಲನೆಯ ಮಾತು.

ಆದರೆ, ಮೂಲಸ್ವಭಾವವನ್ನು ಕಂಡುಹಿಡಿಯುವುದು ಮಾತ್ರ ಸುಲಭಸಾಧ್ಯವಲ್ಲ. ನಿಜವಾದ ಕರ್ಮವಾವುದು ಅಕರ್ಮವಾವುದೆಂಬ ವಿಷಯವು ಎಂತೆಂಥ ಬುದ್ಧಿವಂತರಿಗೂ ಚೆನ್ನಾಗಿ ತಿಳಿಯದು (೪.೧೬). ತನ್ನ ಆತ್ಮದ ಸ್ವರೂಪವೇನು ಎಂಬುದನ್ನು ತಿಳಿಯುವುದು ಬಹಳ ಕಠಿನ ಕೆಲಸವು. ತನ್ನ ಶಾರೀರಿಕ ಮತ್ತು ಮಾನಸಿಕ ಭೋಗೇಚ್ಛೆಗಳಿಗೆ ಬಲಿಬಿದ್ದು, ಮನುಷ್ಯನು ಅವಕ್ಕನುಸರಿಸಿ ನಡೆಯಲಿಕ್ಕೆ ಸಹಜವಾಗಿ ಪ್ರವರ್ತಿಸುತ್ತಾನೆ. ಆಗ, ಆತನು ತಪ್ಪು ದಾರಿಯನ್ನು ಹಿಡಿದನೆಂದು ತಿಳಿಯಬೇಕು. ಆದಕಾರಣ, ತನಗೆ ವಿಹಿತವಾದ ಉದ್ಯೋಗವೆಂದರೆ ತನ್ನ ಆತ್ಮ, ಮನಸ್ಸು ಮತ್ತು ಶರೀರ ಇವೆಲ್ಲಕ್ಕೂ ವಿಹಿತವಾಗಿರುವ ಉದ್ಯೋಗವೆಂದರಿಯಬೇಕು.

ಮೂರನೆಯದೇನೆಂದರೆ ಸ್ವಧರ್ಮಕ್ಕೂ ಪರಧರ್ಮಕ್ಕೂ ಇರುವ ವ್ಯತ್ಯಾಸವನ್ನು ಕಂಡುಹಿಡಿದು, ಪರಧರ್ಮದಿಂದ ಪರಾವೃತ್ತವಾಗುವುದು. ಮಿಕ್ಕವರು ಹೀಗೆ ಮಾಡುತ್ತಾರೆ, ಆದಕಾರಣ, ನಾವೂ ಹಾಗೆ ಮಾಡುವ ಎಂಬ ಅನುಕರಣ ಬುದ್ಧಿಯುಳ್ಳವರೇ ಅನೇಕರು. ಚಂದ ಕಂಡದ್ದನ್ನು ಮಾಡುವುದಕ್ಕೆ ಅವರ ಪ್ರವೃತ್ತಿ. ಇದು ತಪ್ಪು. ಅನ್ಯರಿಗೆ ಅದು ಚಂದವಾದ ಕೆಲಸವಾಗಿರಬಹುದು. ಅದರಿಂದ, ಅದು ತಮಗೂ ವಿಹಿತವಾಗಿರುತ್ತದೆಂದು ತಿಳಿಯುವುದು ತಪ್ಪು. ಆದಕಾರಣ ಮನುಷ್ಯನು ಬಾಹ್ಯದೃಷ್ಟಿಯನ್ನು ಕಡಿಮೆ ಮಾಡಬೇಕು. ಅಂತರ್ದೃಷ್ಟಿಯನ್ನು ಅವಲಂಬಿಸಬೇಕು. ಅದೇ ಸ್ವವಿಹಿತ ವೃತ್ತಿಯನ್ನು ಕಾಣುವ ದಾರಿ. ಪರರು ತಮಗಿಂತ ಹೆಚ್ಚಿನ ಯೋಗ್ಯತೆಯುಳ್ಳವರಿದ್ದರೂ ಅವರನ್ನು ಕೇವಲ ಅನುಕರಣ ಮಾಡುವುದು ಪರಧರ್ಮವು. ಕಡಿಮೆ ಯೋಗ್ಯತೆಯುಳ್ಳವರಿದ್ದರೂ ಅವರನ್ನು ಅನುಕರಣ ಮಾಡುವುದು ಪರಧರ್ಮವು ಅವೆರಡೂ ಸ್ವವಿ

ಹಿತವೃತ್ತಿಗಳಲ್ಲ. ಜನರು ಮುಗ್ಗರಿಸುವುದೂ ಇಲ್ಲಿಯೇ; ಪರಧರ್ಮಕ್ಕೆ ಮನಸೋಲುವವರೇ ಬಹಳ ಜನ. ಆದಕಾರಣ, ಗೀತೆಯು ಮೇಲಿಂದ ಮೇಲೆ ಎಚ್ಚರಿಕೆಯನ್ನು ಕೊಟ್ಟು ಪ್ರತಿಯೊಬ್ಬನೂ ಸ್ವವಿಹಿತವೃತ್ತಿಯನ್ನೇ ಅವಲಂಬಿಸಬೇಕೆಂದು ಘಂಟಾಘೋಷವಾಗಿ ಹೇಳುತ್ತದೆ.

ಪ್ರತಿಯೊಬ್ಬನ ಮೂಲ ಸ್ವಭಾವವು ಒಂದೇ ಇದ್ದರೆ ಈ ಪ್ರಶ್ನೆಯನ್ನೆತ್ತಲಿಕ್ಕೆ ಅವಕಾಶವೇ ಇರುವುದಿಲ್ಲ. ಆದರೆ ಹಾಗೆ ಇರುವುದಿಲ್ಲ. ಜಗತ್ತಿನಲ್ಲಿ ಜೀವಗಳು ತ್ರಿವಿಧವಾಗಿವೆ. ಅವುಗಳಲ್ಲಿಯೂ ಅನಂತಾನಂತ ಭೇದ. ಪ್ರತಿಯೊಬ್ಬ ಜೀವನ ಮೂಲಸ್ವರೂಪ ಬೇರೆ, ಅನಾದಿಕರ್ಮ ಬೇರೆ, ಅವಕ್ಕನುಸರಿಸಿ ಆತನಿಗೆ ದೊರೆಯುತಕ್ಕ ಜನ್ಮ ಬೇರೆ, ಆತನಲ್ಲಿ ಉಂಟಾಗುವ ಮೂಲಸ್ವಭಾವ ಬೇರೆ. ಆದಕಾರಣ, ಒಬ್ಬನ ಉನ್ನತಿಯ ಮಾರ್ಗವು ಮತ್ತೊಬ್ಬನ ಉನ್ನತಿಯ ಮಾರ್ಗವಲ್ಲ. ಈತನ ವಿಕಾಸದ ದಾರಿ ಬೇರೆ, ಆತನ ವಿಕಾಸದ ದಾರಿ ಬೇರೆ. ಪ್ರತಿಯೊಬ್ಬನು ತನ್ನ ಹಾದಿಯನ್ನು ತಾನು ಹಿಡಿಯಬೇಕು. ಅದೇ ಸ್ವಧರ್ಮ, ಅದೇ ಸ್ವವಿಹಿತವೃತ್ತಿ. ಪ್ರತಿಯೊಬ್ಬ ಜೀವನಿಗೆ ಹೇಗೆ ಸ್ವವಿಹಿತವೃತ್ತಿಯಿರುತ್ತದೆಯೋ ಹಾಗೆ ಭಿನ್ನ ಭಿನ್ನ ಗುಂಪುಗಳಿಗೂ ಭಿನ್ನ ಭಿನ್ನ ಸ್ವವಿಹಿತವೃತ್ತಿಗಳಿರುವವು. ಅವು ಆಯಾ ಜನಾಂಗದ ಸ್ವಭಾವವನ್ನವಲಂಬಿಸಿರುತ್ತವೆ. ಅವಕ್ಕೆ ಸಮಷ್ಟಿಜೀವಗಳೆಂದು ಹೇಳಬಹುದು. ಇಂಥ ಸಮಷ್ಟಿಜೀವಗಳಿಗೆ ಸಂಕರ್ಷಣನು ಅಭಿಮಾನಿ ದೇವತೆಯು. ಸಂಕರ್ಷಣನೆಂದರೆ ಚೆನ್ನಾಗಿ ಒಂದೆಡೆಗೆ ಎಳೆಯುವವನು. ಕೆಲಕೆಲವು ಜೀವಗಳು ತಮ್ಮ ತಮ್ಮ ಗುಣಕರ್ಮಗಳ ಮೂಲಕ, ಸ್ವಭಾವದ ಮೂಲಕ, ಪರಿಸ್ಥಿತಿಯ ಮೂಲಕ, ಸಂಸ್ಕೃತಿ ಮತ್ತು ಅನ್ಯಕಾರಣಗಳ ಮೂಲಕ ಒಂದೆಡೆಗೆ ಎಳೆಯಲ್ಪಟ್ಟು ಗುಂಪುಗೂಡುತ್ತವೆ. ದೇಶದಲ್ಲಿ ವರ್ಣ, ಜಾತಿ, ವರ್ಗ, ಜನಾಂಗ ಪಂಥ, ಪಂಗಡ ಮುಂತಾದವುಗಳುಂಟಾಗುವುದಕ್ಕೆ ಇದೇ ಕಾರಣ. ವರ್ಣಗಳು ಮೂಲತಃ ಸಾತ್ವಿಕಾದಿ ಸ್ವಾಭಾವಿಕ ಗುಣಗಳ ಮೂಲಕ ಉಂಟಾದ ಗುಂಪುಗಳು. ಮುಂದೆ ಅವಕ್ಕೆ ಜನ್ಮದ ಸ್ವರೂಪವು ಉಂಟಾಗಿ ಜಾತಿಗಳಾದವು. ಉದ್ಯೋಗವನ್ನನುಗುಣವಾಗಿ ವರ್ಗಗಳಾಗುತ್ತವೆ. ದೇಶಾನುಗುಣ ಜನಾಂಗ ಮತ್ತು ಸಂಸ್ಕೃತಿಯ ಅನುಗುಣ ಜನಾಂಗ,

ಭಾಷಾನುಗುಣಜನಾಂಗ ಇವೇ ಮುಂತಾದವುಗಳು ಪರಿಸ್ಥಿತಿಯ ಮೂಲಕ ಉಂಟಾದವುಗಳು. ವ್ಯಕ್ತಿಯಲ್ಲಿ ಹೀಗೆ ಅಹಂಭಾವವು (Self-consciousness) ಹುಟ್ಟುತ್ತದೆಯೋ ಹಾಗೆ ಈ ಸಮಷ್ಟಿ ಜೀವಗಳಲ್ಲಿಯೂ ಅಹಂಭಾವವು ಹುಟ್ಟೇ ಹುಟ್ಟುತ್ತದೆ. ಹುಟ್ಟಲೇಬೇಕು. ಜಾತಿ ವರ್ಣಗಳಲ್ಲಿ ಮಾತ್ರವೇ ಅದು ಹುಟ್ಟುವುದು, ಮಿಕ್ಕವುಗಳಲ್ಲಿ ಹುಟ್ಟುವುದಿಲ್ಲವೆಂದು ತಿಳಿಯುವುದು ತಪ್ಪು. ಅಹಂ–ಭಾವವು ದೋಷವಲ್ಲ, ಅದು ಅಹಂ–ಕಾರದಲ್ಲಿ ಪರಿಣಮಿಸದಂತೆ ಮಾಡುವುದಷ್ಟೇ ಮನುಷ್ಯನ ಕರ್ತವ್ಯ. ಮತ್ತು ಅಹಂಕಾರವನ್ನು ತಪ್ಪಿಸುವುದಕ್ಕೆ ಆ ಗುಂಪುಗಳನ್ನು ಮುರಿಯುವುದು ಉಪಾಯವಲ್ಲ. ವ್ಯಕ್ತಿಗಳ ಅಹಂಕಾರವನ್ನು ಮುರಿಯುವುದಕ್ಕೆ ಹೇಗೆ ವ್ಯಕ್ತಿನಾಶವು ಉಪಾಯವಲ್ಲವೋ ಹಾಗೆಯೇ ಈ ಸಮಷ್ಟಿಜೀವಗಳ ಅಹಂಕಾರವನ್ನು ನಾಶಮಾಡುವುದಕ್ಕೂ ಆ ಗುಂಪುಗಳ ನಾಶವು ನಿಜವಾದ ಉಪಾಯವಲ್ಲ. ಆತ್ಮದ ನಿಜವಾದ ಜ್ಞಾನವು ಅಂದರೆ ನಿಜಧರ್ಮಪ್ರತಿಷ್ಠಾಪನೆಯು ಉಪಾಯವು. ಇರಲಿ. ಇಂಥ ಗುಂಪುಗಳೂ ತಮ್ಮ ತಮ್ಮ ಸ್ವವಿಹಿತವೃತ್ತಿಯನ್ನವಲಂಬಿಸಬೇಕು. ಇದಕ್ಕೇನೇ ಜಾತಿತ್ವ ಪ್ರಾಂತೀಯತ್ವ, ರಾಷ್ಟ್ರೀಯತ್ವ ಮುಂತಾದ ಹೆಸರುಗಳುಂಟಾಗುತ್ತವೆ. ಅವುಗಳಲ್ಲಿಯ ಅಹಂಭಾವದ ಅತಿರೇಕವಾದರೆ ಅದರಿಂದ ಹಾನಿಯದೆ. ವರ್ಣದ ಅಭಿಮಾನವು ಹೀಗೆ ಅಹಂಭಾವದ ಅತಿರೇಕವಾಗುವದರ ಪರಿಣಾಮ. ಮನುಷ್ಯ ಸ್ವಭಾವವು ಮೂಲತಃ ನಿರ್ದೋಷವಾಗಿರುವುದಿಲ್ಲವಾದ ಕಾರಣ ವರ್ಣಸಂಕರವು ಅಥವಾ ಧರ್ಮಸಂಕರವು ಆಗೇ ಆಗುತ್ತದೆಂಬ ಮಾತು ಶ್ರೀಕೃಷ್ಣನಿಗೂ ಗೊತ್ತಿತ್ತು. ಅದಕ್ಕೆ ಮದ್ದು ವರ್ಣನಾಶವಲ್ಲ, ಅವತಾರಪುರುಷರಿಂದ ಧರ್ಮಪ್ರತಿಷ್ಠಾಪನೆ, ಸಾರಾಂಶ, ವರ್ಣಾಶ್ರಮಗಳಿಗೆ ಮೂಲವು ಆವರವರ ಗುಣಕರ್ಮಗಳು, ಜನ್ಮವಲ್ಲ. ಗುಣಕರ್ಮಗಳೆಂದೊಡನೆ ಮನುಷ್ಯನಲ್ಲಿ ಈಗ ಬಾಹ್ಯತಃ ಕಂಡುಬರುವ ಗುಣಕರ್ಮಗಳನ್ನು ಕೆಲವು ಪಂಡಿತರು ತೆಗೆದುಕೊಳ್ಳುತ್ತಾರೆ. ಅದು ಮಾತ್ರ ತಪ್ಪು. ಗೀತೆಯು ಅಂಥ ಗುಣಕರ್ಮಗಳನ್ನು ತೆಗೆದುಕೊಳ್ಳುವುದಿಲ್ಲ. ಗುಣಗಳೆಂದರೆ ಸಾತ್ವಿಕಾದಿ ಗುಣಗಳು; ಕರ್ಮಗಳೆಂದರೆ ಅನಾದಿಕಾಲದಿಂದ ಜೀವನು

ಮಾಡುತ್ತ ಬಂದಿರುವ ಕರ್ಮದ ಈ ಜನ್ಮದಲ್ಲಿಯು ಭಂಡವಲು. ಬಾಹ್ಯ ಸಾತ್ವಿಕಾದಿ ಗುಣಗಳೂ ಬಾಹ್ಯ ಬ್ರಾಹ್ಮಣ ಕ್ಷತ್ರಿಯಾದಿ ಕರ್ಮಗಳೂ ಈ ಆಂತರಿಕ ಗುಣಕರ್ಮಗಳನ್ನು ನಿರ್ಣಯಿಸುವ ಲಕ್ಷಣ ಮಾತ್ರಗಳು, ಸ್ಥೂಲವಾದ ಆದರೂ ಅನಿವಾರ್ಯವಾದ ಸಾಧನ ಮಾತ್ರಗಳು. ಇರಲಿ.

ಗೀತೆಯಲ್ಲಿ ಸ್ವವಿಹಿತವೃತ್ತಿಯನ್ನೇ ಅವಲಂಬಿಸಬೇಕೆಂಬುದಕ್ಕೆ ಅನೇಕ ಆಧಾರಗಳಿವೆ.* 'ಸ್ವಧರ್ಮದ ದೃಷ್ಟಿಯಿಂದ ವಿಚಾರ ಮಾಡಿದರೂ ಕೂಡ, ನಿನಗೆ ಈ ನಡುಗು ತರವಲ್ಲ (೨.೩೧); ಏಕೆಂದರೆ ಕ್ಷತ್ರಿಯನಾದ ನಿನಗೆ ಧರ್ಮ್ಯವಾದ ಎಂದರೆ ಧರ್ಮಕ್ಕೆ ಸಮ್ಮತವಾದ ಈ ಯುದ್ಧಕ್ಕಿಂತ ಹೆಚ್ಚಿನ ಶ್ರೇಯವು ಮತ್ತಾವುದೂ ಇಲ್ಲ (೨.೩೨);'ಅಕರ್ಮಕ್ಕಿಂತ ಕರ್ಮವು ಹೆಚ್ಚಿನದಾದುದರಿಂದ, ನಿನಗೆ ನಿಯತವಾದ ಎಂದರೆ ವರ್ಣಾಶ್ರಮೋಚಿತವಾದ ಕರ್ಮಮಾಡು (೩,೮); 'ಆದಕಾರಣ, ನೀನು ಅಸಕ್ತನಾಗಿ, ಯಾವಾಗಲೂ, ಮಾಡಬೇಕಾದ ಕರ್ಮಗಳನ್ನು ಮಾಡುತ್ತಲೇ ಇರು (೩.೧೯); ಕುಂದುಳ್ಳದ್ದಾದರೂ ತನ್ನ ಧರ್ಮವೇ ತನಗೆ ಹೆಚ್ಚಿನದು;ತನ್ನ ಧರ್ಮದಲ್ಲಿದ್ದು ಸಾಯುವುದೂ ಲೇಸು, ಪರಧರ್ಮವು ಮಾತ್ರ ಭಯಂಕರವು (೩.೩೫); ''ನಿಯತವಾದುದನ್ನು ಎಂದರೆ ಮಾಡಬೇಕಾದುದನ್ನು ಬಿಟ್ಟುಕೊಡುವುದು ಸಂನ್ಯಾಸವಲ್ಲ (೧೮.೭); ನಿಯತವಾದುದೂ ಸಂಗರಹಿತವಾದುದೂ ರಾಗದ್ವೇಷಗಳನ್ನು ಬಿಟ್ಟುಮಾಡಲ್ಪಟ್ಟುದೂ ಆದ ಕರ್ಮವು ಸಾತ್ವಿಕವು (೧೮.೨೩); 'ಶಮದಮಾದಿಗಳು ಬ್ರಾಹ್ಮಣನ ಸ್ವಭಾವಜಕರ್ಮಗಳು (೧೮.೪೨); ಶೌರ್ಯತೇಜ ಮುಂತಾದವುಗಳು ಕ್ಷತ್ರಿಯನ ಸ್ವಭಾವಜಕರ್ಮಗಳು (೧೮.೪೩); ಕೃಷಿಗೋರಕ್ಷ್ಯಾದಿಗಳು ವೈಶ್ಯನ ಸ್ವಭಾವಜಕರ್ಮಗಳು (೧೮.೪೪); ಮತ್ತು ಪರಿಚರ್ಯಾದಿಗಳು ಶೂದ್ರನ ಸ್ವಭಾವಜಕರ್ಮಗಳು (೧೮.೪೪); ತನ್ನ ಕರ್ಮದಲ್ಲಿ ತೊಡಗಿದವನು ಸಂಸಿದ್ಧಿಯನ್ನು ಎಂದರೆ ಮುಕ್ತಿಯನ್ನು ಹೊಂದುತ್ತಾನೆ;ಸ್ವಕರ್ಮನಿರತನಾದವನು ಸಿದ್ಧಿಯನ್ನು

* ಸ್ವವಿಹಿತವೃತ್ತಿಗೆ ಆಧಾರಗಳು;—೨.೩೧; ೨.೩೨, ೩.೮, ೩.೧೯, ೩.೩೫, ೧೮.೭, ೧೮.೨೩, ೧೮.೪೨, ೧೮.೪೩, ೧೮.೪೪, ೧೮.೪೫, ೧೮.೪೬, ೧೮.೪೭, ೧೮.೪೮, ೧೮.೫೯, ೧೮.೬೦.

ಹೇಗೆ ಹೊಂದುತ್ತಾನೆಂಬುದನ್ನು ಕೇಳು (೧೮.೪೫); ಸ್ವಕರ್ಮದಿಂದ ಪರಮಾತ್ಮನನ್ನು ಪೂಜಿಸಿದರೆ ಸಿದ್ಧಿಯು ದೊರೆಯುತ್ತದೆ. (೧೮.೪೬); ಪರಧರ್ಮವನ್ನು ಚೆನ್ನಾಗಿ ಆಚರಿಸುವುದಕ್ಕಿಂತಲೂ ತನ್ನ ಧರ್ಮವನ್ನು ತುಸು ಕಡಿಮೆಯಾದರೂ ಆಚರಿಸುವುದು ಮೇಲು. ತನ್ನ ಸ್ವಭಾವಕ್ಕೆ ಸುಗುಣವಾದ ಕರ್ಮವನ್ನು ಮಾಡಿದರೆ ಪಾಪವು ತಟ್ಟುವುದಿಲ್ಲ, (೧೮.೪೭); ಸದೋಷವಾಗಿದ್ದರೂ, ತನ್ನ ಸಹಜಕರ್ಮವನ್ನು ತಾನು ಬಿಡಕೂಡದು. ಉರಿಗೆ ಮುಂಚೆ ಹೊಗೆಯು ಹೇಗೋ ಹಾಗೆ ಕೆಲಸಗಳಿಗೆಲ್ಲಕ್ಕೂ ಆರಂಭಕ್ಕೆ ದೋಷವು ಮುಸುಕಿಕೊಂಡಿರುತ್ತದೆ (೧೮.೪೮). ಪ್ರಕೃತಿಯು ನಿನ್ನನ್ನು ಈ ಯುದ್ಧಕರ್ಮದಲ್ಲಿ ನಿಯೋಜಿಸುತ್ತದೆ (೧೮.೫೯), ನಿನ್ನ ಹುಟ್ಟುಗುಣಕ್ಕನುಗುಣವಾದ ಸ್ವಕರ್ಮದಿಂದ ನೀನು ಬಿಗಿಯಾಗಿ ಕಟ್ಟಲ್ಪಟ್ಟಿರುವೆ; ಮೋಹದಿಂದ ಅದನ್ನು ಮಾಡಬಾರದೆಂದು ನೀನು ಇಚ್ಛಿಸಿದರೂ, ನಿನ್ನ ಇಚ್ಛೆಗೆ ವಿರುದ್ಧವಾಗಿಯಾದರೂ ಅದನ್ನು ನೀನು ಮಾಡೇ ಮಾಡುವೆ (೧೮.೬೦)—ಇವೇ ಮುಂತಾದ ಗೀತೆಯ ಶ್ಲೋಕಗಳಿಂದ ಪ್ರತಿಯೊಬ್ಬನು ತನ್ನ ಸ್ವವಿಹಿತವೃತ್ತಿಯನ್ನು ಎಂದರೆ ತನಗುಚಿತವಾದ ಕರ್ಮಗಳನ್ನೇ ಯಾವಾಗಲೂ ಕೈಕೊಳ್ಳಬೇಕೆಂದು ಸ್ಪಷ್ಟವಾಗಿ ಸಿದ್ಧವಾಗುತ್ತದೆ. ಹಾಗೆ ಮಾಡುವುದೇ ಪ್ರತಿಯೊಬ್ಬನ ಸ್ವಧರ್ಮವು.

---

## ೯ನೆಯ ಪ್ರಕರಣ

# ಕರ್ಮಯೋಗ

**ಕಾಯಕವೇ ಕೈಲಾಸ**

**—ಶೂನ್ಯಸಂಪಾದನೆ**

ಸ್ವವಿಹಿತವೃತ್ತಿಯೆಂದರೇನೆಂಬುದನ್ನು ಹೋದ ಪ್ರಕರಣದಲ್ಲಿ ವಿವರಿಸಿದೆವಷ್ಟೆ. ಆದರೆ ಅಷ್ಟು ವಿವರಣೆಯು ಸಾಲದು. ಕರ್ಮಯೋಗ ವೆಂಬುದು ಆ ಸ್ವವಿಹಿತವೃತ್ತಿಯ ಮುಖ್ಯ ರೂಪವು. ಗೀತೆಯಲ್ಲಿ ಈ ಕರ್ಮಯೋಗಕ್ಕೆ ಅತಿಶಯಮಹತ್ವವು ಕೊಡಲ್ಪಟ್ಟಿದೆ, ಅಥವಾ ಗೀತೆಯೆಂದರೇನೇ ಕರ್ಮಯೋಗಶಾಸ್ತ್ರವೆಂದು ಕೆಲವರು ಹೇಳುವಷ್ಟು ಅದಕ್ಕೆ ಮಹತ್ವ ಬಂದಿದೆ. ಆದರೆ ಅದು ಸರಿಯಲ್ಲ. ಕರ್ಮಯೋಗವು ಅದರ ಮುಖ್ಯ ಭಾಗಗಳಲ್ಲಿ ಒಂದು ಎಂಬುದು ನಮ್ಮ ಹಿಂದಿನ ವಿವೇಚನೆ ಯಿಂದ ಮನವರಿಕೆಯಾಗಿರಲಿಕ್ಕೆ ಸಾಕು. ಸರ್ವವೂ 'ಭಗವದಧೀನ' ವೆಂಬ ಜ್ಞಾನ, ಪರಮಾತ್ಮನ ಭಕ್ತಿ, ಮತ್ತು ಭಗವಂತನ ಆರಾಧನೆ ಇವೇ ಮುಂತಾದವುಗಳೇನೂ ಕರ್ಮಯೋಗಕ್ಕಿಂತ ಕಡಿಮೆ ಮಹತ್ವದ ವುಗಳಲ್ಲ. ಇರಲಿ.

ಕರ್ಮಯೋಗವು ಸ್ವವಿಹಿತವೃತ್ತಿಯ ಮುಖ್ಯರೂಪವೆಂದು ಹೇಳಿದೆವಷ್ಟೆ. ಧ್ಯಾನಯೋಗವೂ ಆ ಸ್ವವಿಹಿತವೃತ್ತಿಯ ರೂಪವೇ. ಗೀತೆಯಲ್ಲಿ ಅದೂ ಬಂದಿದೆ. ಆದರೆ ಅದನ್ನು ನಾವು ಭಕ್ತಿಯಲ್ಲಿ ಸಮಾವೇಶ ಮಾಡುತ್ತೇವೆ. ಮತ್ತು ಇಲ್ಲಿ, ಕೇವಲ ಕರ್ಮಯೋಗವನ್ನಷ್ಟೆ ವಿವೇಚಿಸುತ್ತೇವೆ. ಇಲ್ಲಿ, ಕರ್ಮವೆಂಬುದನ್ನು ನಾವು ವಿಶಿಷ್ಟವಾದ ಅರ್ಥದಲ್ಲಿ ಉಪಯೋಗಿಸುತ್ತೇವೆಂಬುದನ್ನು ಮರೆಯಬಾರದು. ಒಂದು ದೃಷ್ಟಿಯಿಂದ ನೋಡಿದರೆ, ಶ್ರವಣಮನನ ಧ್ಯಾನಾದಿಗಳೂ ಕರ್ಮಗಳೇ. ಆದರೆ ಅವುಗಳಿಗೆ ಸಾಮಾನ್ಯತಃ ಕರ್ಮವೆಂದೆನ್ನುವ ರೂಢಿಯಿಲ್ಲ. ಇರಲಿ. ಸ್ವಲ್ಪಾದರೂ ಕರ್ಮ ಮಾಡದೆ ಜೀವಂತವಿರುವುದು ಕೂಡ ಶಕ್ಯವಿಲ್ಲ (೩.೫); 'ದೇಹಧಾರಿಗೆ ಕರ್ಮಗಳನ್ನು ಅಶೇಷವಾಗಿ ಬಿಡುವುದು ಶಕ್ಯವೇ

ಇಲ್ಲ (೧೮.೧೧); ಕರ್ಮವಾಡದಿದ್ದರೆ ಶರೀರಯಾತ್ರೆಯು ಸಾಗುವುದೇ ಇಲ್ಲ (೩.೮). ಎಂದಬಳಿಕ, ಮನುಷ್ಯನು ಮಾಡತಕ್ಕದ್ದೇನು ? ತಾನು ಮಾಡುವ ಕರ್ಮಗಳು ಪರಮಾತ್ಮನ ಜ್ಞಾನಕ್ಕೆ ಸಾಧನಗಳಾಗಿ ತದ್ವಾರಾ ಮುಕ್ತಿಸಾಧನಗಳು ಹೇಗೆ ಆಗುವವೋ ಹಾಗೆ ಅವುಗಳನ್ನು ಮಾಡುವುದೊಂದೇ ಮಾರ್ಗವು ಆತನಿಗೆ ತೆರವು ಉಳಿಯುತ್ತು. ಆ ತರಹದ ಯುಕ್ತಿಯನ್ನು ಹೇಳುವುದೇ ಕರ್ಮಯೋಗದ ಉದ್ದೇಶವು.

ಸಾಮಾನ್ಯತಃ ಕರ್ಮಗಳು ಯಾವಾಗಲೂ ಬಂಧಕಗಳು, ಎಂದರೆ ಮೋಕ್ಷಮಾರ್ಗದೊಳಗಿನ ಎಡರುಗಳು. ಏಕೆಂದರೆ, ಕರ್ಮವನ್ನು ಮಾಡಿದ ಬಳಿಕ ಅದರಿಂದ ಕೆಟ್ಟದೇ ಆಗಲಿ ಚಲೋದೇ ಆಗಲಿ ಪರಿಣಾಮ ನಂತರ ಆಗಲೇಬೇಕಷ್ಟೇ. ಕೆಟ್ಟ ಪರಿಣಾಮವುಂಟಾದರೆ ಅದರಿಂದ ಇಹ ಲೋಕದಲ್ಲಿ ದುಃಖವಾಗುವುದಲ್ಲದೆ, ಪಾಪವು ತಗಲಿ ಪರಲೋಕ ದಲ್ಲಿಯೂ ದುಃಖವಾಗುವುದೆಂಬುದನ್ನು ಬೇರೆ ಹೇಳಲಿಕ್ಕೆ ಬೇಡ. ಆದ ಕಾರಣ, ಮನುಷ್ಯನು ಕೆಟ್ಟ ಕರ್ಮಗಳನ್ನು ಬಿಡಬೇಕೆಂಬುದನ್ನು ತಿಳಿ ಯುವುದಕ್ಕೆ ಯಾರಿಗೂ ವಿಶೇಷ ಶ್ರಮಪಡಬೇಕಾಗಿಲ್ಲ. ಅಂಥ ಕರ್ಮ ಗಳಿಗೆ ತಾಮಸಕರ್ಮಗಳೆಂದು ಹೆಸರು. ಆದರೆ ಚಲೋ ಕರ್ಮಗಳನ್ನು ಮಾಡಬೇಕೋ ಬಿಡಬೇಕೋ ಎಂಬ ಪ್ರಶ್ನೆಯು ಕಠಿನವಾದುದು. ಏಕೆಂದರೆ ಚಲೋ ಕರ್ಮಗಳಿಂದ ಇಹಲೋಕದಲ್ಲಿ ಸುಖವಾಗುತ್ತದೆ. ಪುಣ್ಯವು ಒದಗಿ ಪರಲೋಕದಲ್ಲಿ ಸ್ವರ್ಗಾದಿಗಳ ಲಾಭವೂ ಆಗುತ್ತದೆ. ಆದಕಾರಣ, ಇಂಥ ಕರ್ಮಗಳನ್ನು ಮಾಡಬೇಡಿರೆಂದು ಗೀತೆಯು ಹೇಳ ಲಿಕ್ಕೆ ಕಾರಣವಿಲ್ಲ, ಹೇಳಿಲ್ಲ. ಆದರೆ ಚಲೋ ಕರ್ಮಗಳಲ್ಲಿಯೂ ನಾವು ಹಿಂದೆ ಹೇಳಿದಂತೆ ಎರಡು ಭಾಗಗಳನ್ನು ಮಾಡಿದೆ. ಅವನ್ನು ಸಕಾಮ ದಿಂದ ಮಾಡಿದರೆ ಸ್ವರ್ಗಾದಿ ಕ್ಷಣಿಕ ಸುಖವು ದೊರೆಯುತ್ತದೆ. ಆ ಪುಣ್ಯವು ತೀರಿದ ಬಳಿಕ ಪುನಃ ಹುಟ್ಟು ತಪ್ಪುವುದಿಲ್ಲ. ಮತ್ತು, ಹುಟ್ಟು ಸಾವುಗಳನ್ನು ವಿಾರದಿದ್ದರೆ ಮುಕ್ತಿಯಿಲ್ಲ. ಆದಕಾರಣ, ಮನುಷ್ಯನು ಮುಕ್ತಿಯನ್ನು ಪಡೆಯುಬೇಕೆಂದು ಇಚ್ಛಿಸಿದರೆ ಈ ಪುಣ್ಯವನ್ನೂ ದಾಟಿ, ಅದಕ್ಕಿಂತ ಉಚ್ಚತರಹದ ಸ್ಥಿತಿಗೆ ಹೋಗಬೇಕು. ಒಂದು ವಿಶಿಷ್ಟವಾದ ರೀತಿಯಿಂದ ಕರ್ಮಗಳನ್ನು ಮಾಡಿದರೆ ಕರ್ಮಗಳು ಬಂಧಕಗಳಾಗುವು

ದಿಲ್ಲ. ಆ ತರಹದ ಉಪಾಯವನ್ನು ಹೇಳುವುದೇ ಯೋಗವು (೨.೩೯). ಏಕೆಂದರೆ, ಕರ್ಮದಿಂದ ಪುಣ್ಯವೇ ಬರಲಿ, ಪಾಪವೇ ಬರಲಿ, ಎರಡೂ ಮನುಷ್ಯನಿಗೆ ಮುಕ್ತಿ ದೊರೆಯುವುದಕ್ಕೆ ಪ್ರತಿಬಂಧಕಗಳೇ. ಆದಕಾರಣವೇ, ಗೀತೆಯು ಪುನಃ ಪುನಃ ಕರ್ಮಬಂಧನವನ್ನು ಕಡಿಯಲು ಉಪದೇಶಿಸುತ್ತದೆ. ಶ್ರೀಕೃಷ್ಣನು ೨ನೆಯ ಅಧ್ಯಾಯದಲ್ಲಿ ಸಾಂಖ್ಯವನ್ನು ಅಂದರೆ ಜ್ಞಾನವನ್ನು ಉಪದೇಶಿಸಿದ ಕೂಡಲೆ, ಮೊದಲಿಗೇ ಹೇಳುವದೇನೆಂದರೆ 'ಜ್ಞಾನದ ಉಪಾಯದ ಸಂಬಂಧವಾಗಿ ಬುದ್ಧಿಯ ಮಾತುಗಳನ್ನು ಹೇಳುತ್ತೇನೆ, ಕೇಳು. ಆ ಬುದ್ಧಿಯ ಮಾತಿನಂತೆ ನಡೆದರೆ, ನೀನು ಕರ್ಮದ ಕಟ್ಟನ್ನು ಸಹಜವಾಗಿ ಹರಿಯುವಿ' (೨.೩೯) ಎಂಬ ಪ್ರತಿಜ್ಞೆಯಿಂದಲೇ ಕರ್ಮಯೋಗದ ಉಪದೇಶಕ್ಕೆ ಪ್ರಾರಂಭಿಸಿದ್ದಾನೆ. 'ಬುದ್ಧಿಯುಕ್ತನಾದವನು ಅಂದರೆ ಭಗವಂತನ ಜ್ಞಾನದಿಂದ ಯುಕ್ತನಾದವನು ಪಾಪವನ್ನೂ ಮತ್ತು ಮುಕ್ತಿಗೆ ಪ್ರತಿಬಂಧಕವಾಗುವ ಪುಣ್ಯವನ್ನೂ ಎರಡನ್ನೂ ಬಿಡುತ್ತಾನೆ (೨.೫೦) ಎಂದರೆ ನಾವು ೭ನೆಯ ಪ್ರಕರಣದಲ್ಲಿ ಹೇಳಿದ ಪರಮಾತ್ಮನ ಜ್ಞಾನವು ಕರ್ಮದ ಕಟ್ಟನ್ನು ಹರಿಯುವುದಕ್ಕೆ ಒಂದು ಉಪಾಯವು ಎಂದು ಹೇಳಿದಂತಾಯಿತು. ಹಾಗೆ ಮಾಡುವುದೇ ಕರ್ಮದಲ್ಲಿಯ ಕೌಶಲ್ಯವು (೨.೫೦). 'ಕರ್ಮದಿಂದ ಹುಟ್ಟುವ ಫಲವನ್ನು ತ್ಯಜಿಸಿ, ಬುದ್ಧಿ ಎಂದರೆ ಜ್ಞಾನದಿಂದ ಕೂಡಿದವರಾಗಿ ಬುದ್ಧಿವಂತರು ಜನ್ಮದ ಸೆರೆಯನ್ನು ಬಿಡಿಸಿಕೊಂಡು ದುಃಖರಹಿತವಾದ ಮೋಕ್ಷಪದವಿಯನ್ನು ಪಡೆಯುತ್ತಾರೆ (೨.೫೧). ಇದರಿಂದ, ಕರ್ಮವು ಬಂಧಕವಾಗದಿರಬೇಕಾದರೆ (೧) ಪರಮಾತ್ಮನ ಜ್ಞಾನ (೨) ಕರ್ಮಫಲೇಚ್ಛಾರಾಹಿತ್ಯ ಇವೆರಡು ಗುಣಗಳು ಬೇಕೆಂದು ಹೇಳಿದಂತಾಯಿತು. ಅದಕ್ಕೆ ಬೇಕಾಗುವ ಮೂರನೆಯ ಗುಣವೆಂದರೆ ಕರ್ಮಗಳನ್ನು ಭಗವಂತನ ಪೂಜೆಯೆಂದು ಮಾಡುವುದು. ಯಜ್ಞವೆಂದು ಎಂದರೆ ಭಗವಂತನ ಪೂಜೆಯೆಂದು ಮಾಡಿದ ಕರ್ಮಗಳು ಹೊರತಾಗಿ ಮಿಕ್ಕ ಕರ್ಮಗಳು ಬಂಧಕವಾಗುವವು (೩.೯). ಇದರಿಂದ ಅನೇಕ ಬಾಹ್ಯಕರ್ಮಗಳನ್ನು ಮಾಡುತ್ತಿದ್ದ ಮಾತ್ರಕ್ಕೆ ಆತನು ಕರ್ಮಯೋಗಿಯಾಗಲಾರನು. ಅಂಥವನು ಕರ್ಮವೀರನೆನಿಸಬಹುದು. ಕರ್ಮಯೋಗಿ

ಯೆಂದರೆ ಕರ್ಮಗಳನ್ನು ಸ್ವಲ್ಪೇ ಮಾಡಲಿ, ಬಹಳೇ ಮಾಡಲಿ,ಯೋಗ ವೆಂದು ಎಂದರೆ ಈಶ್ವರಪೂಜೆಯೆಂದು ಮಾಡುವವನು ಎಂದು ಅರ್ಥ. ಆದಕಾರಣ ನನ್ನ ಸಂಬಂಧವಾದ ಕರ್ಮಗಳನ್ನು ಮಾಡುವುದರಲ್ಲಿ ತೊಡಗು. ನನ್ನಗೋಸ್ಕರ ಮಾಡತಕ್ಕ ಕರ್ಮಗಳನ್ನು ಮಾಡಿದರೂ ನಿನಗೆ ಸಿದ್ಧಿಯು ದೊರೆಯುವುದು (೧೨.೧೦); ಎಂದು ಆತನು ಅರ್ಜುನನಿಗೆ ಉಪದೇಶಿಸಿರುವನು. "ಹೀಗೆ ಮಾಡಿದರೆ, ಅವುಗಳ ಶುಭಾಶುಭ ಕರ್ಮಬಂಧದಿಂದ ಪಾರಾಗುವಿ' (೯.೨೮) ಎಂದು ಆತನಿಗೆ ಹೇಳಿರುವನು. ಪರಮಾತ್ಮನಿಗೋಸ್ಕರವಾಗಿ ಕರ್ಮಮಾಡಬೇಕಾದರೆ ಆತನಲ್ಲಿ ಭಕ್ತಿಯಿರಬೇಕಾಗುತ್ತದಷ್ಟೆ. ಆದಕಾರಣ, ಭಕ್ತಿಯು ಕರ್ಮಬಂಧವನ್ನು ಕಡಿಯಲು ಬೇಕಾಗುವ ನಾಲ್ಕನೆಯ ಗುಣವು. ಯಾರು ನನ್ನೀ ಮಾತಿನಲ್ಲಿ ನಂಬುಗೆಯನ್ನಿಟ್ಟು ಅಸೂಯೆಯಿಲ್ಲದವರಾಗಿ ನಡೆಯುತ್ತಾರೋ ಅವರು ಕರ್ಮದ ಕಟ್ಟಿನಿಂದ ಬಿಡುಗಡೆ ಹೊಂದುತ್ತಾರೆ (೩.೩೧); ಕರ್ಮಗಳು ಪರಮಾತ್ಮನನ್ನು ಲೇಪಿಸುವುದಿಲ್ಲವೆಂಬ ಜ್ಞಾನವುಳ್ಳವರಿಗೂ ಕರ್ಮಗಳು ಬಂಧಿಸುವುದಿಲ್ಲ (೪.೧೪). ಚಿತ್ತವನ್ನೂ ಮನಸ್ಸನ್ನೂ ಬಿಗಿಹಿಡಿದುಕೊಂಡು,ಬಯಕೆಗಳೆಲ್ಲವನ್ನೂ ಬಿಟ್ಟವನು, ಕೇವಲ ಶರೀರಧಾರಣಾರ್ಥವಾಗಿ ಕರ್ಮಮಾಡಿದರೆ ಆತನಿಗೆ ಅವುಗಳ ಕಿಲ್ಬಿಷವು ಹತ್ತುವುದಿಲ್ಲ (೪.೨೧) ವೆಂದು ಹೇಳಿರುವುದರಿಂದ, ಮನುಷ್ಯನು ಶರೀರಧಾರಣಕ್ಕೋಸ್ಕರವೇ ಬೇಕಾಗುವಷ್ಟು ಕರ್ಮಗಳನ್ನು ಮಾಡಬೇಕಲ್ಲದೆ, ಹೆಚ್ಚಿನ ಭೋಗೆಚ್ಛೆಯಿಂದ ಅವುಗಳನ್ನು ಮಾಡಬಾರದೆಂದು ಹೇಳಿದಂತಾಯಿತು. ೪.೨೩ ನೆಯ ಶ್ಲೋಕವು ಕರ್ಮಬಂಧವು ಹೇಗೆ ಪರಿಹಾರವಾಗುತ್ತದೆಂಬುದಕ್ಕೆ ಉಪಸಂಹಾರಾತ್ಮಕ ಶ್ಲೋಕವು. ಇದರಲ್ಲಿ ಕರ್ಮಬಂಧವನ್ನು ಹರಿಯುವುದಕ್ಕೆ ಬೇಕಾಗುವ ಗುಣಗಳು ಒಟ್ಟುಗೂಡಿಸಿ ಹೇಳಲ್ಪಟ್ಟಿವೆ. ಅವು ಯಾವುವೆಂದರೆ (೧) ಫಲಸ್ನೇಹವನ್ನು ಬಿಡುವುದು. (೨) ದೇಹಾದಿಗಳ ಅಭಿಮಾನವನ್ನು ಬಿಡುವುದು. (೩) ಪರಮಾತ್ಮನ ಜ್ಞಾನದಲ್ಲಿ ಮನಸ್ಸನ್ನಿಡುವುದು. (೪) ಯಜ್ಞಕ್ಕೋಸ್ಕರ ಎಂದರೆ ಪರಮಾತ್ಮನ ಪೂಜೆಯೆಂದು ಕರ್ಮಮಾಡುವುದು (೪.೨೩). ಯಜ್ಞಗಳಲ್ಲಿ ಅನೇಕ ತರಹಗಳಿದ್ದು ಅವೆಲ್ಲವೂ ಕರ್ಮದಿಂದಲೇ

ಹುಟ್ಟುತ್ತವೆ. ಹೀಗೆ ತಿಳಿದವರು ಕರ್ಮದ ಕಟ್ಟಿನಿಂದ ಬಿಡುಗಡೆ ಹೊಂದುವರೆಂದೂ ಹೇಳಿದೆ (೪.೪೪). ಸುಖದುಃಖಾದಿ ದ್ವಂದ್ವಗಳನ್ನು ಬಿಟ್ಟವನು ಸುಲಭವಾಗಿ ಕರ್ಮಬಂಧದಿಂದ ಬಿಡುಗಡೆಹೊಂದುತ್ತಾನೆಂದು (೫.೨), ಹೇಳಿರುವುದರಿಂದ, ದ್ವಂದ್ವಾದಿಗಳನ್ನು ಬಿಡುವುದು ಕರ್ಮ ಬಂಧವನ್ನು ಪರಿಹರಿಸುವುದಕ್ಕೆ ಉಪಾಯವು ಎಂದು ಹೇಳಿದಂತಾಯಿತು. ೫.೭ ರಲ್ಲಿ ಯೋಗಯುಕ್ತನಾದವನೂ ಪರಿಶುದ್ಧವಾದ ಮನಸ್ಸುಳ್ಳವನೂ ಮನಸ್ಸನ್ನು ಅಧೀನದಲ್ಲಿ ಇಟ್ಟುಕೊಂಡವನೂ ಜಿತೇಂದ್ರಿಯನೂ ಸರ್ವ ಪ್ರಾಣಿಗಳಿಗೆ ಆತ್ಮಭೂತನಾಗಿರುವ ಪರಮಾತ್ಮನೇ ತನ್ನ ಸ್ವಾಮಿಯೆಂದು ತಿಳಿಯುವವನೂ ಎಂದರೆ ಜ್ಞಾನಿಯಾದವನು ಕರ್ಮಮಾಡಿದರೆ ಆತನಿಗೆ ಕರ್ಮಲೇಪವಿಲ್ಲ (೫.೭)—ಎಂದು ಕರ್ಮಬಂಧವನ್ನು ಕಳೆದುಕೊಂಡ ವನ ಲಕ್ಷಣಗಳನ್ನು ಹೇಳಿರುವನು. ಕರ್ಮಗಳನ್ನು ಬ್ರಹ್ಮನಿಗೆ ಅರ್ಪಿಸಿ ಫಲೇಚ್ಛೆಯನ್ನು ಬಿಟ್ಟು ಯಾವತ್ತು ಕರ್ಮಗಳನ್ನು ಮಾಡುವವನಿಗೆ, ಕಮಲದ ಎಲೆಗೆ ಹೇಗೆ ನೀರಿನ ಲೇಪವು ಆಗುವುದಿಲ್ಲವೋ ಹಾಗೆ ಪಾಪ ಲೇಪವಾಗುವುದಿಲ್ಲ (೫.೧೦)—ಎಂಬುದಾಗಿ ಕರ್ಮಬಂಧನ ಪರಿಹಾರಕ್ಕೆ ಬೇಕಾಗುವ ಮುಖ್ಯ ಎರಡು ಲಕ್ಷಣಗಳಾದ ಸಂನ್ಯಾಸ ಮತ್ತು ಯೋಗ ಇವುಗಳನ್ನು ಕ್ರೋಡೀಕರಿಸಿರುವನು. ಯೋಗವಿಲ್ಲದವನು ಎಂದರೆ ಪರಮಾತ್ಮನಲ್ಲಿ ಮನಸ್ಸನ್ನಿಡದವನು, ಫಲದಲ್ಲಿ ಮನಸ್ಸನ್ನಿಡುವುದರಿಂದ ಬದ್ಧನಾಗುತ್ತಾನೆ (೫.೧೨). ಈ ರೀತಿಯಾಗಿ, ಗೀತೆಯು ಅನೇಕ ವಿಧ ವಾಗಿ ಕರ್ಮಬಂಧದ ಪರಿಹಾರವನ್ನು ವರ್ಣಿಸಿರುತ್ತದೆ.

ಕರ್ಮಗಳನ್ನು ಮಾಡುವುದು ಮುಖ್ಯವಾಗಿ ಎರಡು ಉದ್ದೇಶ ಗಳ ಸಲುವಾಗಿ (೧) ಆತ್ಮಶುದ್ಧಿ (೨) ಜ್ಞಾನಪ್ರಾಪ್ತಿ "ಯೋಗಿಗಳು ಶರೀರದಿಂದಲೂ ಮನಸ್ಸಿನಿಂದಲೂ ಬುದ್ಧಿಯಿಂದಲೂ ಕೇವಲ ಇಂದ್ರಿಯ ಗಳಿಂದಲೂ ಮಾಡಬೇಕಾದ ಕರ್ಮಗಳನ್ನು ಕೂಡ, ಫಲೇಚ್ಛೆಯನ್ನು ಬಿಟ್ಟು ಆತ್ಮಶುದ್ಧಿಗೋಸ್ಕರ ಮಾಡುತ್ತಾರೆ (೫.೧೧); "ಸರ್ವಕರ್ಮವೂ ಜ್ಞಾನದಲ್ಲಿ ಕೊನೆ ಮುಟ್ಟುತ್ತದೆ (೪.೩೩) ಎಂದರೆ ಯಾವತ್ತು ಕರ್ಮ ಗಳ ಕೊನೆಯ ಉದ್ದೇಶವು ಪರಮಾತ್ಮನ ಅಪರೋಕ್ಷಜ್ಞಾನವನ್ನು ಸಂಪಾದಿಸುವುದು ಎಂದು ಹೇಳಿದೆ.

ಕರ್ಮಗಳನ್ನು ಮಾಡುವುದರಿಂದ ಆತ್ಮಶುದ್ಧಿ, ಎಂದರೆ ಅಂತಃಕರಣ ಶುದ್ಧಿಯಾಗುವುದೆಂಬುದು ಎಲ್ಲರಿಗೂ ಬೇಗನೆ ತಿಳಿಯುತಕ್ಕ ವಿಷಯವು. ಏಕೆಂದರೆ, ಕರ್ಮವನ್ನು ಚೆನ್ನಾಗಿ ಮಾಡುವುದಕ್ಕೆ ಎಂದರೆ ಕರ್ಮದ ಬಂಧವು ತಗಲದಂತೆ ಅದನ್ನು ಮಾಡುವುದಕ್ಕೆ ಮೇಲೆ ಅನೇಕ ಗುಣಗಳು ಬೇಕಾಗುವವೆಂದು ಹೇಳಿತಷ್ಟೆ. ಆದರಿಂದ, ಕರ್ಮಗಳನ್ನು ಮಾಡುವವನು ಆ ಗುಣಗಳನ್ನು ಸಂಪಾದಿಸಲೇಬೇಕಾಗುತ್ತದೆ. ಆದ ಕಾರಣ, ಕರ್ಮಗಳನ್ನು ಯಥಾಯೋಗ್ಯವಾಗಿ ಮಾಡುತ್ತ ಹೋಗುವುದರಿಂದ ಅಂತಃಕರಣ ಶುದ್ಧಿಯು ಆಗುತ್ತದೆಂಬುದು ಸಹಜವಾಗಿ ತಿಳಿಯುವ ಮಾತು. ಆದರೆ, ನಾವು ನಮ್ಮ ಸ್ವವಿಹಿತಕರ್ಮಗಳನ್ನು ಮಾಡುತ್ತ ಹೋದರೆ ಪರಮಾತ್ಮನ ಅಪರೋಕ್ಷಜ್ಞಾನವು ಏಕೆ ಆಗಬೇಕೆಂಬುದು ಬೇಗನೆ ತಿಳಿಯದ ವಿಷಯ. ಅದನ್ನು ಸ್ವಲ್ಪ ತಿಳಿಸಿ ಹೇಳುವೆವು. ತತ್ವದರ್ಶಿಗಳಿಗೆ ಶರಣು ಹೋದರೆ ಅವರು ನಿಮಗೆ ತತ್ವಜ್ಞಾನವನ್ನು ಉಪದೇಶಿಸುತ್ತಾರೆಂದು (೪.೩೪) ಹೇಳಿಯದೆ. ಮತ್ತು ಶ್ರೀಕೃಷ್ಣನು ೨ನೆಯ ಅಧ್ಯಾಯದಲ್ಲಿ ಪರಮಾತ್ಮ ವಿಷಯಕವಾದ ತತ್ವಜ್ಞಾನವನ್ನು ಅರ್ಜುನನಿಗೆ ಶ್ರವಣ ಮಾಡಿಸಿಯೇ ಯೋಗವನ್ನು ಹೇಳುವುದಕ್ಕೆ ಪ್ರಾರಂಭಿಸಿದ್ದಾನೆ. ಅದೇ ಮೇರೆಗೆ ೭ನೆಯ ಮತ್ತು ೯ನೆಯ ಅಧ್ಯಾಯಗಳಲ್ಲಿಯೂ ಜ್ಞಾನವಿಜ್ಞಾನಗಳನ್ನು ಉಪದೇಶಿಸಿರುವನು. ೧೩ನೆಯ ಅಧ್ಯಾಯದಲ್ಲಿಯೂ ಜ್ಞಾನವು ಹೇಳಲ್ಪಟ್ಟಿದೆ. ಸಾರಾಂಶ, ಇಂಥ ತತ್ವಜ್ಞಾನದ ವಿಷಯಗಳನ್ನು ಮೇಲಿಂದ ಮೇಲೆ ಕೇಳುವುದರಿಂದ ನಮಗೆ ಪರಮಾತ್ಮನ ಜ್ಞಾನವಾಗುವುದೆಂದು ಹೇಳಿದರೆ ಎಲ್ಲರೂ ಒಪ್ಪಬಹುದಾದ ಮಾತು. ಹಾಗೆಯೇ ಮನನವೂ ಜ್ಞಾನಕ್ಕೆ ಅವಶ್ಯವಾದ ಸಾಧನ. ಏಕೆಂದರೆ, ಮನಸ್ಸಿನಲ್ಲಿಯ ಸಂದೇಹಗಳನ್ನು ಕಳೆದುಕೊಳ್ಳುವುದಕ್ಕೆ ಮತ್ತು ಕಲಿತದುದನ್ನು ದೃಢೀಕರಿಸಿಕೊಳ್ಳುವುದಕ್ಕೋಸ್ಕರ ಮನನವು ಅವಶ್ಯ. ಈ ಶ್ರವಣ ಮನನಗಳ ಮೂಲಕ ಧ್ಯಾನವು ಉತ್ಪನ್ನವಾಗಿ ಅದು ಪರಮಾತ್ಮನ ಅಪರೋಕ್ಷಜ್ಞಾನಕ್ಕೆ ಕಾರಣವಾಗುತ್ತದೆ. ಇದು ಸಹಜವಾಗಿ ತಿಳಿಯತಕ್ಕ ಮಾತು. ಆದರೆ, ಸ್ವವಿಹಿತ ಕರ್ಮಗಳನ್ನಾಚರಿಸುವುದರಿಂದ ಜ್ಞಾನವು ಏಕೆ ಉಂಟಾಗಬೇಕು? ಇದಕ್ಕೆ ಕಾರಣ

ವೇನೆಂದರೆ, ವಿಹಿತ ಕರ್ಮಾನುಷ್ಠಾನದಿಂದ ಚಿತ್ತಶುದ್ಧಿಯಂತೂ ಆಗುತ್ತ ದಷ್ಟೆ. ಹೀಗೆ ಚಿತ್ತಶುದ್ಧಿಯಾಯಿತೆಂದರೆ, ಪರಮಾತ್ಮ ವಿಷಯಕ ಜ್ಞಾನ ವನ್ನು ಸಂಪಾದಿಸಬೇಕೆಂಬ ಬುದ್ಧಿಯು ತಾನಾಗಿಯೇ ಹುಟ್ಟುತ್ತದೆ. ಏಕೆಂದರೆ, ಕರ್ಮಯೋಗಿಗೆ ಚಿತ್ತಶುದ್ಧಿಗೋಸ್ಕರ ಹೇಗೆ ವೈರಾಗ್ಯವು ಅಥವಾ ಸಂನ್ಯಾಸವು ಆವಶ್ಯಕವೋ ಹಾಗೆಯೇ ಈಶ್ವರಾರ್ಪಣರೂಪ ವಾದ ಯೋಗವೂ ಆವಶ್ಯಕವು. ಇವೆರಡುಗಳಿಂದ ಕೂಡಿದ್ದೇ ಕರ್ಮ ಯೋಗವು. ಆದಕಾರಣ, ಹೀಗೆ ಮನುಷ್ಯನಲ್ಲಿ ಈಶ್ವರಾರ್ಪಣ ಬುದ್ಧಿ ಯುಂಟಾಗಬೇಕಾದರೆ ಈಶ್ವರ ವಿಷಯಕ ಜ್ಞಾನವು ಅವಶ್ಯವಿಲ್ಲವೆ? ಆದ ಕಾರಣ, ಕರ್ಮಯೋಗಿಯು ತನ್ನ ಕರ್ಮಗಳನ್ನು ಅನುಷ್ಠಾನ ಮಾಡ ತೊಡಗಿದನೆಂದರೆ ಆತನಲ್ಲಿ ಜ್ಞಾನವನ್ನು ಗಳಿಸಬೇಕೆಂಬ ಲವಲವಿಕೆಯು ತಾನಾಗಿಯೇ ಹುಟ್ಟಿ ಆತನು ಶ್ರವಣಮನನಾದಿಗಳ ಕಡೆಗೆ ಮನಸ್ಸನ್ನು ತಿರುಗಿಸುತ್ತಾನೆ. ಸತ್ಕರ್ಮಾನುಷ್ಠಾನ ಮಾಡುವವನಿಗೆ ಪರಮಾತ್ಮನು ಪ್ರಸನ್ನನಾಗುತ್ತಾನೆ. ಮತ್ತು ಆತನ ಬುದ್ಧಿಯನ್ನು ವಿಕಾಸಗೊಳಿಸಿ, ಆತನಿಗೆ ಜ್ಞಾನವನ್ನು ಉತ್ಪನ್ನಮಾಡಿಕೊಡುತ್ತಾನೆ. ಕೇವಲ ಶ್ರವ ಣಾದಿಗಳಿಂದ ಬರುವ ಜ್ಞಾನಕ್ಕೂ ಕರ್ಮಯೋಗಾನುಷ್ಠಾನದ ಮೂಲಕ ವಾಗಿ ಶ್ರವಣ ಮನನಾದಿಗಳಿಂದ ಉಂಟಾಗುವ ಜ್ಞಾನಕ್ಕೂ ಭೇದವಿದೆ. ಶ್ರವಣಾದಿಗಳಿಂದ ಉಂಟಾಗುವ ಜ್ಞಾನವು ಕೇವಲ ಬೌದ್ಧಿಕವಾಗಿರುವ ಸಂಭವವು ಹೆಚ್ಚಾಗಿರುವುದರಿಂದ, ಅದು ಪರಮಾತ್ಮನ ಸಂಬಂಧವಾಗಿ ಯಥಾರ್ಥವಾದ ಜ್ಞಾನವನ್ನು ಒಂದು ವೇಳೆ ಹುಟ್ಟಿಸಲಿಕ್ಕೂ ಇಲ್ಲ. ಆದರೆ, ಕರ್ಮಾನುಷ್ಠಾನದಿಂದ ಪ್ರಾಪ್ತವಾಗುವ ಜ್ಞಾನಕ್ಕೆ ಈ ಬಗೆಯ ಅಂಜಿಕೆಯಿರುವುದಿಲ್ಲ. ಏಕೆಂದರೆ ಅದು ಕೇವಲ ಬೌದ್ಧಿಕ ಜ್ಞಾನವಾಗಿ ರದೆ ಅದಕ್ಕೆ ಪ್ರತಿ ಕ್ಷಣಕ್ಕೆ ಅನುಭವದ ಬೆಂಬಲವು ದೊರೆತಿರುತ್ತದೆ. ಆದಕಾರಣವೇ, ಗೀತೆಯು ಕರ್ಮಯೋಗಕ್ಕೆ ಇಷ್ಟೊಂದು ಮಹತ್ವವನ್ನು ಕೊಟ್ಟಿರುತ್ತದೆ. ಕೇವಲ ಶ್ರವಣಾದಿಗಳು ವ್ಯರ್ಥವೇನೂ ಅಲ್ಲ. ಜ್ಞಾನಾ ದಿಗಳಿಗೆ ಕಾರಣಗಳಾಗುವುದರಿಂದ ಅವಕ್ಕೂ ಸಾರ್ಥಕ್ಯವಿದೆ. ಇರಲಿ.

ಇವೆಲ್ಲ ಕಾರಣಗಳ ಸಲುವಾಗಿಯೇ ಶೂನ್ಯಸಂಪಾದನೆಯಲ್ಲಿ "ಕಾಯಕದಲ್ಲಿ ನಿರತನಾದರೆ, ಗುರುದರುಶನವಾದರೂ ಮರೆಯಬೇಕು.

ಲಿಂಗಪೂಜೆಯಾದರೂ ಮರೆಯಬೇಕು. ಜಂಗಮ ಮುಂದಿದ್ದಡೆಯೂ ಹಂಗುಹರಿಯಬೇಕು, ಕಾಯಕವೇ ಕೈಲಾಸವಾದಕಾರಣ-ಎಂದು ಹೇಳಿದೆ. ತನ್ನ ಕರ್ತವ್ಯಕರ್ಮವನ್ನು ಮಾಡುವುದರಿಂದಲೇ ಆತನ ಪೂಜೆ (೧೮.೪೬) ಎಂದು ಗೀತೆಯಲ್ಲಿ ಹೇಳಿದುದರ ಭಾವವೂ ಇದೇ.

ಮೇಲಿನ ವಿವೇಚನೆಯ ಒಟ್ಟು ತಾತ್ಪರ್ಯವೇನೆಂದರೆ ಕರ್ಮ ಯೋಗವು ಪರಮಧರ್ಮದ ಮುಖ್ಯ ಅಂಗವು. ಈ ಕರ್ಮಯೋಗದಲ್ಲಿ ಎರಡು ಅಂಶಗಳು (೧) ಸಂನ್ಯಾಸ ಅಥವಾ ವೈರಾಗ್ಯ (೨) ಯೋಗ ಅಥವಾ ಈಶ್ವರಾರ್ಪಣ ಬುದ್ಧಿ. ಇವೆರಡುಗಳಿಂದ ಕೂಡಿದ ಸ್ವವಿಹಿತ ಕರ್ಮವೇ ಕರ್ಮಯೋಗವು. ಮುಂದಿನ ಪ್ರಕರಣಗಳಲ್ಲಿ ಕರ್ಮ ಯೋಗದ ಇವೆರಡು ಅಂಶಗಳನ್ನು ವಿಸ್ತಾರವಾಗಿ ತಿಳಿಸುವೆವು.

---

## ೧೦ನೆಯ ಪ್ರಕರಣ

# ಸಂನ್ಯಾಸ ಮತ್ತು ನಿಷ್ಕಾಮಕರ್ಮ

ಸಿರಿಯು ಬಂದರೆ ಹಿಗ್ಗಿ ನಡೆಯರು।
ಬರವು ಬಂದರೆ ತಗ್ಗಿ ನಡೆಯರು।
ಪರಿಪರಿಯ ದುಃಖಗಳು ಬಂದರು ಮರುಗರವರೊಮ್ಮೆ॥

ತರುಣಿ ಮಕ್ಕಳ ಜರಿದುಬಿಟ್ಟರು।
ಬರುವ ಮಾರಿಯ ತಿಂಬೆನೆಂಬರು।
ಎರಗರೋ ಅನ್ಯರಿಗೆ ನಿನ್ನಯ ಕಿಂಕರರು ನಿನಹೊರತು॥

— ಕನಕದಾಸ

ಸಂನ್ಯಾಸ ಮತ್ತು ಯೋಗ ಇವುಗಳಿಂದ ಕೂಡಿದ್ದೇ ಕರ್ಮಯೋಗ ವೆಂಬುದನ್ನು ಹಿಂದಿನ ಪ್ರಕರಣದಲ್ಲಿ ಹೇಳಿದೆವಷ್ಟೆ. ಕರ್ಮಯೋಗದ ಇವೆರಡು ಅಂಶಗಳನ್ನು ಹೆಚ್ಚಿಗೆ ವಿಸ್ತರಿಸುವುದು ಅವಶ್ಯವಿದೆ. ಅವು ಗಳಲ್ಲಿ, ಈ ಪ್ರಕರಣದಲ್ಲಿ ಸಂನ್ಯಾಸವನ್ನು ಪ್ರಪಂಚಿಸುವೆವು.

ಸಂನ್ಯಾಸವೆಂಬ ಶಬ್ದವು ಗೀತೆಯನ್ನೋದುವವರಿಗೆ, ಹೆಜ್ಜೆ ಹೆಜ್ಜೆಗೆ

ಭೆಟ್ಟಿಯಾಗುವ ಶಬ್ದವು. ಆದಕಾರಣ, ಅದರಲ್ಲಿ ಅಡಕವಾಗಿರುವ ಕಲ್ಪನೆಗಳಾವವೆಂಬುದನ್ನು ಅರಿಯಲೇಬೇಕು. ಸಂನ್ಯಾಸವೆಂದರೆ ಚೆನ್ನಾಗಿ ಬಿಡುವುದು–ಎಂದು ಅರ್ಥ. ಗೀತೆಯು, ಮನುಷ್ಯನು ಮುಕ್ತಿಯನ್ನು ಹೊಂದಬೇಕಾದರೆ ಮೊದಲಿಗೆ ಅನೇಕ ಸಂಗತಿಗಳನ್ನು ಬಿಡಲು ಹೇಳುತ್ತದೆ. ಸಂನ್ಯಾಸವೇ ಮೋಕ್ಷಮಾರ್ಗದಲ್ಲಿಯ ಮೊದಲನೆಯ ಹೆಜ್ಜೆಯು. ಮೋಕ್ಷಕ್ಕೆ ಅಡ್ಡಬರುವ ಯಾವತ್ತು ಸಂಗತಿಗಳನ್ನು ಚೆನ್ನಾಗಿ ಬಿಡುವುದೇ ಸಂನ್ಯಾಸ. ಇಂಥ ಸಂಗತಿಗಳು ಅನೇಕವಾಗಿವೆ. ಗೀತೆಯಲ್ಲಿ ಅವುಗಳನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆಯಾಗಿ ವರ್ಣಿಸಿರುವುದು. ಸಂಕಲ್ಪತ್ಯಾಗ (೪.೧೯; ೬.೨; ೬.೩), ಆರಂಭತ್ಯಾಗ (೧೨.೧೬; ೧೪.೨೫), ಸಂಗತ್ಯಾಗ (೫.೧೦), ಸ್ನೇಹತ್ಯಾಗ (೨ ೫೭), ಆಸಕ್ತಿತ್ಯಾಗ (೩.೧೯), ಅಭಿಷ್ವಂಗತ್ಯಾಗ (೬.೪), ಸಕ್ತಿತ್ಯಾಗ (೩.೧೯), ಆಕಾಂಕ್ಷಾತ್ಯಾಗ (೪.೧೨), ಅಪೇಕ್ಷಾತ್ಯಾಗ (೧೨ ೧೬), ತೃಷ್ಣಾತ್ಯಾಗ (೧೪.೭), ಕಾಮತ್ಯಾಗ (೨.೫೫; ೨.೭೦), ಕಾಮಕ್ರೋಧತ್ಯಾಗ (೫.೨೬), ಆಶಾತ್ಯಾಗ (೪.೧೪), ಸ್ಪೃಹಾತ್ಯಾಗ (೨.೭೦), ಇಚ್ಛಾಭಯಕ್ರೋಧತ್ಯಾಗ (೫.೨೮), ಸುಕೃತದುಷ್ಕೃತತ್ಯಾಗ (೨.೫೦), ಶುಭಾಶುಭ ಪರಿತ್ಯಾಗ (೧೨.೧೭), ರಾಗ ದ್ವೇಷತ್ಯಾಗ (೨.೬೪; ೧೮.೫೧; ೧೮.೨೩), ಸುಖದುಃಖತ್ಯಾಗ (೨.೩೮), ಯೋಗಕ್ಷೇಮತ್ಯಾಗ (೨.೪೫), ಹರ್ಷಾಮರ್ಷಭಯೋದ್ವೇಗತ್ಯಾಗ (೧೨.೧೫), ದ್ವಂದ್ವತ್ಯಾಗ (೨ ೪೫), ದ್ವಂದ್ವಮೋಹತ್ಯಾಗ (೭.೨೭; ೭.೨೮; ೧೫.೧೭), ಕಾಮಕ್ರೋಧ ಲೋಭತ್ಯಾಗ (೧೬.೨೨), ಕರ್ಮಫಲತ್ಯಾಗ (೫.೧೨; ೧೨.೧೧; ೧೨.೧೨), ಕರ್ಮಫಲಸ್ಪೃಹಾತ್ಯಾಗ (೪.೧೪), ಕರ್ಮಫಲಾಸಂಗತ್ಯಾಗ (೪.೨೦), ಕರ್ಮಜ ಫಲತ್ಯಾಗ (೨.೫೧), ಕರ್ಮಫಲ ಹೇತುತ್ಯಾಗ (೨.೪೭), ಅಭಿಮಾನತ್ಯಾಗ (೧೩.೧೦) ಮಮತ್ವತ್ಯಾಗ (೨.೭೦), ಕರ್ತೃತ್ವಾಭಿಮಾನತ್ಯಾಗ (೧೩.೩೦), ಅಹಂಕಾರತ್ಯಾಗ (೨.೭) ಸರ್ವಪರಿಗ್ರಹತ್ಯಾಗ (೪.೨೧; ೬.೧೦),-ಈ ಪ್ರಕಾರವಾಗಿ ವಿಧವಿಧವಾದ ಶಬ್ದಗಳಿಂದ ಸಂನ್ಯಾಸವು ಗೀತೆಯಲ್ಲಿ ಹೇಳಲ್ಪಟ್ಟಿರುವುದು. ಇವುಗಳೊಳಗಿನ ಸೂಕ್ಷ್ಮವಾದ ಭೇದಗಳನ್ನು ಹೇಳುವುದಕ್ಕೆ ಇದು ಸ್ಥಳವಲ್ಲ. ಒಟ್ಟಿನಮೇಲಿಂದ, ಇವುಗಳನ್ನೆಲ್ಲ ನಾಲ್ಕು

ವಿಧವಾಗಿ ವರ್ಗೀಕರಣ ಮಾಡಬಹುದು. (೧) ಕಾಮಾದಿಗಳನ್ನು ಬಿಡುವುದು (೨) ರಾಗ ದ್ವೇಷಾದಿದ್ವಂದ್ವಗಳನ್ನು ಬಿಡುವುದು (೩) ಕರ್ಮಫಲವನ್ನು ಬಿಡುವುದು (೪) ಕರ್ತೃತ್ವಾಭಿಮಾನವನ್ನು ಬಿಡುವುದು. ಕಾಮಾದಿಗಳನ್ನು ಜಯಿಸಿದವನೇ ಸಂನ್ಯಾಸಿಯು. ವಿಷಯಚಿಂತನದಿಂದ ಅವುಗಳಲ್ಲಿ ಸಂಗವು ಅಥವಾ ಸ್ನೇಹವು ಹುಟ್ಟುತ್ತದೆ. ಅದರಿಂದ ಮುಂದೆ ಕಾಮಕ್ರೋಧಾದಿಗಳು ಹುಟ್ಟುತ್ತವೆಯೆಂದು (೨.೬೨-೬೪) ಗೀತೆಯಲ್ಲಿ ಹೇಳಿರುವುದು. ಆದಕಾರಣ, ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನು ಬಿಡುವುದೇ ಮೊದಲನ ಕೆಲಸ. ಇವುಗಳನ್ನು ಬಿಟ್ಟರೆ ವಿಷಯಗಳಲ್ಲಿರುವ ರಾಗದ್ವೇಷಾದಿಗಳು ಶಾಂತವಾಗುತ್ತವೆ. ತಮಗೆ ಅನುಕೂಲವಾದ ವಿಷಯದಲ್ಲಿ ರಾಗವು ಎಂದರೆ ಪ್ರೀತಿಯೂ ಪ್ರತಿಕೂಲವಾದ ವಿಷಯದಲ್ಲಿ ದ್ವೇಷವೂ ಉಂಟಾಗುವುದು ಸ್ವಾಭಾವಿಕವು. ಆದರೆ ಆ ರಾಗದ್ವೇಷಾದಿಗಳು ಸುಖದುಃಖಗಳಿಗೆ ಕಾರಣಗಳು. ಆದಕಾರಣ, ಅವುಗಳನ್ನು ಬಿಡಬೇಕು. ರಾಗದ್ವೇಷಗಳನ್ನು ಬಿಡುವುದೆಂದರೆ ಸರ್ವ ದ್ವಂದ್ವಗಳ ಮೋಹವನ್ನು ಬಿಡುವುದು. ಸುಖದುಃಖ, ಲಾಭಾಲಾಭ, ಶುಭಾಶುಭ, ಮಾನಾಪಮಾನ ಇವೇ ಮುಂತಾದವುಗಳನ್ನು ಬಿಡುವುದು ಸಂನ್ಯಾಸವು. ಈ ಬಗೆಯಾಗಿ ರಾಗದ್ವೇಷಾದಿಗಳನ್ನು ಬಿಟ್ಟನೆಂದರೆ ಕರ್ಮಯೋಗಿಯಲ್ಲಿರುವ ಕರ್ಮಫಲಾಪೇಕ್ಷೆಯು ಶಾಂತವಾಗುತ್ತದೆ. ಆತನು ಕರ್ಮಫಲದ ಚಿಂತೆಯನ್ನೇ ಮಾಡುವುದಿಲ್ಲ. ಕಾಮವೇ ಇವೆಲ್ಲವುಗಳಿಗೂ ಮೂಲವಾದುದರಿಂದ ಕರ್ಮಯೋಗಿಯು ಮಾಡುವ ಇಂಥ ಕರ್ಮಕ್ಕೆ ನಿಷ್ಕಾಮಕರ್ಮವೆನ್ನುತ್ತಾರೆ. ನಿಷ್ಕಾಮಕರ್ಮವೆಂಬುದು ಕರ್ಮಯೋಗದಲ್ಲಿಯ ಒಂದು ಅಂಶವಾದ ಸಂನ್ಯಾಸದ ಲಕ್ಷಣವು. ಗೀತೆಯಲ್ಲಿ ಮತ್ತೂ ಒಂದು ತರಹದ ಸಂನ್ಯಾಸವು ಹೇಳಲ್ಪಟ್ಟಿದೆ. ಅದಾವುದೆಂದರೆ ಕರ್ತೃತ್ವಾಭಿಮಾನತ್ಯಾಗ. ಪ್ರತಿಯೊಂದು ಕರ್ಮಕ್ಕೆ ಐದು ಕಾರಣಗಳಿರುತ್ತವೆ (೧) ಅಧಿಷ್ಠಾನ (೨) ಕರ್ತೃ (೩) ಕರಣ (೪) ಪ್ರಥಕ್ ಚೇಷ್ಟೆ (೫) ದೈವ. ಕರ್ತನು ಈ ಐದು ಕಾರಣಗಳಲ್ಲಿ ಒಂದು ಕಾರಣನು. ಹೀಗಿದ್ದು, ಯಾವದೊಂದು ಕರ್ಮಕ್ಕೆ ತಾನೊಬ್ಬನೇ ಕಾರಣನೆಂದು ತಿಳಿಯುವುದು ಅಹಂಕಾರವಲ್ಲದೆ ಮತ್ತೇನು? ಇಂಥ ಅಭಿಮಾನತ್ಯಾಗವೂ ಸಂನ್ಯಾಸವೇ.

ಈ ಬಗೆಯಾಗಿ, ನಾವು ಗೀತೆಯಲ್ಲಿ ಬಂದಿರುವ ವಿವಿಧ ಸಂನ್ಯಾಸಗಳನ್ನು ಉಲ್ಲೇಖಿಸಿದೆವು. ಸಂನ್ಯಾಸ ಶಬ್ದವು ಗೀತೆಗೆ ಪ್ರಿಯವಾದ ಶಬ್ದವಾದಾಗ್ಯೂ ಈಗಿನ ಕಾಲದಲ್ಲಿ ಅದೇ ಮನೋವೃತ್ತಿಗೆ ವೈರಾಗ್ಯವೆಂದು ಕರೆಯುವ ರೂಢಿಯುಂಟು. ವೈರಾಗ್ಯವೆಂಬ ಶಬ್ದವೂ ಗೀತೆಯಲ್ಲಿ ಬಂದಿದೆ (೬.೩೫; ೧೩.೮). ಈ ವೈರಾಗ್ಯದ ಮಹಿಮೆಯನ್ನು ನಮ್ಮ ವೇದಾಂತಿಗಳು ಪರಿಪರಿಯಾಗಿ ವರ್ಣಿಸಿರುವರು.

ನಿಂದಾಸ್ತುತಿಗಳ ತಾಳಿಕೋ । ಬಹು ।
ಸಂದೇಹ ಬಂದಲ್ಲಿ ಕೇಳಿಕೋ ।
ಬಂದಷ್ಟರಲಿ ಬಾಳಿಕೋ । ಗೋ ।
ವಿಂದ ನನ್ನವನೆಂದು ಹೇಳಿಕೋ ।

ಎಂಬುದಾಗಿ ಕನಕದಾಸರು ಸಂನ್ಯಾಸವನ್ನು ವರ್ಣಿಸಿರುವರು.

'ಒಮ್ಮೆ ಕಾಮಾದಿಗಳಲೊಂದಿಹು । ದೊಂಮ ವೈರಾಗ್ಯದಲಿ ಸಂಸೃತಿ !
ಧರ್ಮದಿಂದೊಮ್ಮೊಮ್ಮೆ ತತ್ವವಿಚಾರ ಚಿಂತೆಯಲಿ ॥
ಒಮ್ಮೆ ಪುಣ್ಯದೊಳೊಮ್ಮೆ ಪಾಪದೊಳೊಮ್ಮೆ ಸುಖದುಃಖದಲಿ ತೊಡರಿಹು ।
ದೊಮ್ಮೆಯದನರಿದಿಪ್ಪುದೆ ನೀನೆಂದು ನಿಶ್ಚಯವು ॥

ಎಂಬುದಾಗಿ ಅನುಭವಾಮೃತದಲ್ಲಿ ಸಂಸಾರವನ್ನು ವರ್ಣಿಸಿ

ಹಿಂದೆ ಮಾಡಿದ ಸುಕೃತಫಲ ತನ । ಗಿಂದು ಬಂದೊಡಗಿದರೆ ನರನದ ।
ರಿಂದ ಪರಮ ವಿವೇಕವೈರಾಗ್ಯನುವ ನೆರೆಪಡೆದು ॥
ಒಂದರಲಿ ಸುಖವೆಂಬುದೇ ತನ । ಗೊಂದು ಬಾರಿಯು ತೋರದಿಹುದದ ।
ರಿಂದ ಮನದಲಿನೊಂದು ಸುಖದಿಚ್ಛೆಯನು ಮಾಡುವನು ॥

ಎಂಬುದಾಗಿ ವೈರಾಗ್ಯಬುದ್ಧಿಯೇ ನಿಜಸುಖದ ಆಗರವಾದ ಮೋಕ್ಷಕ್ಕೆ ಪ್ರಥಮಸೋಪಾನವೆಂದು ಹೇಳಿರುವರು.

ಆದುದರಿಂದಲೇ, ಗೀತೆಯಲ್ಲಿ ಸಂನ್ಯಾಸಕ್ಕೆ ಇಷ್ಟೊಂದು ಮಹತ್ವ. ಸಂನ್ಯಾಸವು ಹೀಗೆ ಮೋಕ್ಷಕ್ಕೆ ಮೊದಲು ಮೆಟ್ಟಲಾದುದರಿಂದಲೂ ಅದು ಪರಂಪರೆಯಿಂದ ಮೋಕ್ಷಕ್ಕೆ ಕಾರಣವಾಗುವುದರಿಂದಲೂ ಅದರಿಂದ ಮೋಕ್ಷಪ್ರಾಪ್ತಿಯೆಂದು ಕೂಡ ಕೆಲವು ಕಡೆಗೆ ಅದು ಸ್ತುತಿಸಲ್ಪಟ್ಟಿದೆ. ಸಂನ್ಯಾಸದ ಮುಖ್ಯ ಪರಿಣಾಮವು ಅಂತಃಕರಣಶುದ್ಧಿ. ದುರ್ವಿಚಾರಗಳೆಲ್ಲವೂ ಕಿತ್ತು ಹೋಗುವುದರಿಂದ, ಅವುಗಳ ಸ್ಥಳದಲ್ಲಿ

ಸದ್ವಿಚಾರಗಳನ್ನು ನಾಟುವುದಕ್ಕೆ ಅನುಕೂಲವಾಗುತ್ತದೆ. ಸಂನ್ಯಾಸವುಳ್ಳ ಅಂಥವನಿಗೆ ಜೀವನ್ಮುಕ್ತನೆಂದು ಕೂಡ ಅನುಭವಾಮೃತವು ಸ್ತುತಿಸಿರುವುದು.

**ಹಾವಿನಲಿ ಹಾರದಲಿ ಶಿಲೆಯಲಿ । ಹೂವಿನಲಿ ಹೆಂಟೆಯಲಿ ಮಣಿಯಲಿ ।**
**ಬಾವೆಯಲಿ ತೃಣದಲಿ ಶಿಲೆಯಲಿ ಶತ್ರುವಿನಲ್ಲಿ ಮಿತ್ರರಲಿ ॥**
**ಭಾವಭೇದವ ಬಿಟ್ಟು ಸಮತೆಯ । ಸಾವಧಾನದಿ ವಿಹರಿಸುತ್ತಿಹ ।**
**ಪಾವನಾಶ್ರಮಗಳಲಿ ಜೀವನ್ಮುಕ್ತ ಕೇಳೆಂದ**

**— ಅನುಭವಾಮೃತ**

ಈ ಸಂನ್ಯಾಸಕ್ಕೆ ನಮ್ಮವರು ಎಷ್ಟು ಮಹತ್ವವನ್ನು ಕೊಟ್ಟಿರುವರೆಂದರೆ ನಮ್ಮ ವೇದಾಂತದಲ್ಲಿ ಎಲ್ಲಿ ನೋಡಿದರೂ ಅದರ ವರ್ಣನೆಯೇ ಕಂಡು ಬರುವುದು. ವೈರಾಗ್ಯವು ಕರ್ಮಯೋಗದ ಒಂದು ಭಾಗ ಮಾತ್ರವೆಂಬುದನ್ನು ನಾವು ಮರೆಯುವವರೆಗೆ ಅದರ ಅತಿರೇಕವಾಗದೆ,ಮತ್ತು ಸಂನ್ಯಾಸವೇ ಸರ್ವಸ್ವವೆಂಬ ಭಾವನೆಯು ನಮ್ಮಲ್ಲಿ ತಳವೂರಿದೆ. ಕಾಮನ ಉಬ್ಬಿಗೆ ಬಲೆಯನ್ನು ಬೀಸಬಾರದೆಂಬುದೇನೋ ನಿಜ. ಆದರೆ ಕೈವಲ್ಯಕಲ್ಪವಲ್ಲರಿಯು.

**ವ್ಯಸನ ದಾರಿದ್ರ್ಯ ಋಣರೋಗಗಳು ಬಂದು ಬಾ ।**
**ಧಿಸುವ ಸಮಯದೊಳೆಂತು ಸಂಸಾರವ ॥**
**ವಿಷವಾಗಿ ಕಾಂಬದಂತುಳಿದ ಕಾಲದೊಳು ಮೋ ।**
**ಹಿಸದವನು ಬಿಟ್ಟಿದೋರ್ಪಡದುವೆ ವಿರತಿ ॥**

ಎಂಬುದಾಗಿ ಅತಿರೇಕವಾದ ಭಾವನೆಯನ್ನು ತಾಳುವುದುಚಿತವಲ್ಲ. ಹಾಗೆ ಸರ್ಪಭೂಷಣರು ಹಾಡಿದ್ದು ಕೇವಲ ಸ್ತುತಿಯೆಂದು ತಿಳಿಯಬೇಕು. ಏಕೆಂದರೆ ಅವರೇ ಸಂನ್ಯಾಸ ಶಬ್ದದ ನಿಜವಾದ ಅರ್ಥವನ್ನು

**ಮುಂದಿವರವ ಬಿಡಬೇಡ । ಪರ್ವತಾಗ್ರದೊಳಿರ್ಪ ।**
**ಕಂದರದಿ ನಿಲಬೇಡ ಬರಿದೆ ॥ ಮಾನವ ॥**
**ಕಂದ ಮೂಲವ ಸವಿಯಬೇಡ ನಿನ್ನಯ ತನುವ। ಕಂದಿ ಕುಂದಿಸಬೇಡ॥ ಮಾನವ॥**

ಎಂಬ ಶಬ್ದಗಳಲ್ಲಿ ಹೇಳಿದ್ದಾರೆ.

**ಧನಪರಿತ್ಯಾಗವನ್ನು ಮಾಡಿದರಾಯಿತೆ । ಘನವೈರಾಗ್ಯವಲ್ಲ, ನೋಡಿ ॥**
**ಮನೆಯ ಬಿಟ್ಟೇಕಾಂತದೊಳು ಕುಳಿತರಾಯಿತೆ । ಘನವೈರಾಗ್ಯವಲ್ಲ, ನೋಡಿ ॥**

ಎಂಬುದಾಗಿ ಗೋಪಾಳದಾಸರು ಹಾಡಿದ್ದನ್ನು ನಾವು ಸ್ಮರಣದಲ್ಲಿಡ ಬೇಕು. ''ಸತಿಸುತರ ಬಿಟ್ಟು ಯತಿಗಳಾಶ್ರಮವೇಕೆ'' ಎಂದು ಪುರಂದರ ದಾಸರೂ ಹೇಳಿರುವರು.

ಸಂನ್ಯಾಸವೆಂದೊಡನೆಯೇ ಮನಸ್ಸಿನೊಳಗಿನ ಸಕಲಇಚ್ಛೆಗಳ ನ್ನೂ ತ್ಯಾಗ ಮಾಡುವುದೆಂದು ಕೆಲವರು ತಿಳಿಯುತ್ತಾರೆ. ಅದೂ ಸರಿ ಯಲ್ಲ. ಗೀತೆಯು ಮನಸ್ಸನ್ನು ಶೂನ್ಯಾಕಾರವಾಗಿ ಮಾಡಲು ಹೇಳುವು ದಿಲ್ಲ. ಆ ಮನಸ್ಸಿನಲ್ಲಿ ಮೋಕ್ಷಕ್ಕೆ ಪ್ರತಿಬಂಧಕವಾಗುವ ವಸ್ತುಗಳನ್ನು ಹೊರದೂಡಲು ಮಾತ್ರ ಹೇಳುತ್ತದೆ. ಅಸ್ಥಿರವ ಮನೋಭಾವಗಳಿಗೆ ಚಲೋ ರೂಪವನ್ನು ಕೊಡಲು ಹೇಳುತ್ತದೆ. ದುರ್ವಾಸನೆಗಳನ್ನು ಕಿತ್ತೊಗೆದು ಸದ್ವಾಸನೆಗಳನ್ನು ಬೇರೂರಲು ಹೇಳುತ್ತದೆ. ರಾಗದ್ವೇಷಾ ದಿಗಳನ್ನು ಬಿಟ್ಟವನೇ ನಿತ್ಯಸಂನ್ಯಾಸಿಯೆಂದು ಗೀತೆಯು ಸಂನ್ಯಾಸದ ವ್ಯಾಖ್ಯೆ (೫.೩).ಈ ಅರ್ಥದಲ್ಲಿ, ಸಂನ್ಯಾಸಿಗಳಷ್ಟೇ ಸಂನ್ಯಾಸವುಳ್ಳವರಲ್ಲ; ಬ್ರಹ್ಮಚರ್ಯ ಮತ್ತು ಗೃಹಸ್ಥಾದಿ ಆಶ್ರಮಗಳಲ್ಲಿದ್ದವರೂ ಸಂನ್ಯಾಸಿ ಗಳೇ. ಹರಿಕಥಾಮೃತಸಾರದಲ್ಲಿ ಜಗನ್ನಾಥ ದಾಸರು

**ಪತಿಯೊಡನೆ ಮನಬಂದ ತೆರದಲಿ। ಪ್ರತಿದಿವಸದಲಿ ರಮಿಸಿ ಮೋದಿಸಿ।**
**ಸುತರ ಪಡೆದಿಳೆಯೊಳು ಜಿತೇಂದ್ರಿಯಳೆಂದು ಕರೆಸುವಳು।**

ಎಂಬುದಾಗಿ ಸಂನ್ಯಾಸ ಅಥವಾ ವೈರಾಗ್ಯದ ನಿಜವಾದ ಮರ್ಮವನ್ನ ರುಹಿದ್ದಾರೆ. ನಿಯತವಾದ ಕರ್ಮಗಳನ್ನು ಬಿಡುವುದು ಉಚಿತವಲ್ಲವೆಂದು ಗೀತೆಯಲ್ಲಿ ಹೇಳಿದೆ (೧೮.೭); ಆದಕಾರಣ ಕಾಮನಾತ್ಯಾಗವೇ ಸಂನ್ಯಾ ಸವು, ಕರ್ಮತ್ಯಾಗವು ಸಂನ್ಯಾಸವಲ್ಲ. ಕಾಮ್ಯಕರ್ಮಗಳ ನ್ಯಾಸವು ಸಂನ್ಯಾಸವೆಂದು ಗೀತೆಯೇ ಸಂನ್ಯಾಸದ ವ್ಯಾಖ್ಯೆಯನ್ನು ಕೊಟ್ಟಿದೆ (೧೮.೧); ಕಾಮಾತುರತೆಯು ಹೇಗೆ ನಿಂದ್ಯವೋ ಹಾಗೆ ಕರ್ಮಾತುರ ತೆಯೂ ನಿಂದ್ಯವೇ. ಆತುರ ಸಂನ್ಯಾಸವೂ ನಿಂದ್ಯವೇ.

ಸರ್ವಕರ್ಮಗಳನ್ನು ಸಂನ್ಯಾಸ ಮಾಡಲಿಕ್ಕೆ ಹೇಳಿದ ಶ್ಲೋಕ ಗಳೂ ಗೀತೆಯಲ್ಲಿ ಉಂಟು. ಉದಾ: ೫.೧೩; ೧೨.೧೬; ೧೮.೫೭ ಆದರೆ, ಅವುಗಳಲ್ಲಿಯೇ ಆ ಕರ್ಮಗಳನ್ನು ಮನಸ್ಸಿನಿಂದ ತ್ಯಾಗ ಮಾಡಬೇಕೆಂದು ಹೇಳಿದೆ. ೫.೧೩ ರಲ್ಲಿ ಜಿತೇಂದ್ರಿಯನಾದವನು ಎಲ್ಲ ಕರ್ಮಗಳನ್ನು

ಮನಸ್ಸಿನಿಂದ ತ್ಯಾಗಮಾಡಿ ತಾನು ಯಾವುದನ್ನೂ ಮಾಡುವವನೂ ಅಲ್ಲ, ಮಾಡಿಸುವವನೂ ಅಲ್ಲವೆಂದು ಬಗೆಯಬೇಕೆಂದು ಹೇಳಿದೆ. ಇದರಿಂದ ಕರ್ತೃತ್ವಾಭಿಮಾನವನ್ನು ತ್ಯಾಗ ಮಾಡಲಿಕ್ಕೆ ಹೇಳಿದಂತಾಯಿತೇ ಹೊರತು, ಕರ್ಮಗಳನ್ನು ಸ್ವರೂಪತಃ ತ್ಯಾಗಮಾಡೆಂದು ಹೇಳಿದಂತಾಗಲಿಲ್ಲ. ೧೨.೧೬ ರಲ್ಲಿ ಎಲ್ಲ ಕರ್ಮಗಳ ಆರಂಭವನ್ನು ಅಂದರೆ ಆಸಕ್ತಿಯನ್ನು ಬಿಡಲಿಕ್ಕೆ ಹೇಳಿದೆ. ೧೮.೫೭ ರಲ್ಲಿ ಎಲ್ಲ ಕರ್ಮಗಳನ್ನು ಮನಸ್ಸಿನಿಂದ ಪರಮಾತ್ಮನಿಗೆ ಸಮರ್ಪಿಸಲಿಕ್ಕೆ ಹೇಳಿದೆ. ಹಾಗೆಯೇ ಸರ್ವ ಕಾಮಗಳ ತ್ಯಾಗವನ್ನೂ ಅಕ್ಷರಶಃ ತೆಗೆದುಕೊಳ್ಳಕೂಡದು. ೨.೫೫; ೨.೭೧; ೪.೧೯; ೬.೧೫; ೬.೨೪; ೬.೨; ೬.೩—ಈ ಶ್ಲೋಕಗಳಲ್ಲಿ ಹೀಗೆ ಸರ್ವಕಾಮತ್ಯಾಗವು ಹೇಳಿದೆ. ಆದರೆ ಯಾವತ್ತು ಕಾಮಗಳನ್ನು ಬಿಡುವುದೆಂದರೆ ಧರ್ಮಕ್ಕೆ ವಿರುದ್ಧವಾದ ಕಾಮಗಳನ್ನು ಬಿಡಬೇಕೆಂದೇ ತಿಳಿಯಬೇಕಲ್ಲದೆ ಧರ್ಮಕ್ಕೆ ಅವಿರುದ್ಧವಾದ ಕಾಮಗಳನ್ನು ಅಥವಾ ಬಯಕೆಗಳನ್ನು ಬಿಡುವ ಕಾರಣವಿಲ್ಲ. ಏಕೆಂದರೆ ಗೀತೆಯಲ್ಲಿಯೇ ವಿಭೂತಿಗಳನ್ನು ವರ್ಣಿಸುವಾಗ ಧರ್ಮಕ್ಕೆ ಅವಿರುದ್ಧವಾದ ಕಾಮನು ತಾನು (೭.೧೧) ಎಂದು ಕೃಷ್ಣನು ಹೇಳಿದ್ದಾನೆ.

ಈ ಸಂನ್ಯಾಸವನ್ನು ಸಂಪಾದಿಸಲಿಕ್ಕೆ ಅನೇಕ ಉಪಾಯಗಳು ಗೀತೆಯಲ್ಲಿ ಹೇಳಲ್ಪಟ್ಟಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ (೧) ಇಂದ್ರಿಯ ಜಯ (೨) ಮನೋಜಯ. ಉಪವಾಸಾದಿಗಳಿಂದ ಇಂದ್ರಿಯ ಜಯವನ್ನು ಕೆಲಮಟ್ಟಿಗೆ ಮಾಡಿಕೊಳ್ಳಬಹುದು. ಆದರೆ, ಮನಸ್ಸನ್ನು ಜಯಿಸಿ ಬಿಟ್ಟರೆ ಇಂದ್ರಿಯ ಜಯವು ತ್ವರಿತದಿಂದ ಆಗುತ್ತದೆ. (೩.೫೫; ೩.೬೪).(೩) ಪರಮಾತ್ಮನಲ್ಲಿ ಭಕ್ತಿಯನ್ನು ಹೆಚ್ಚಿಸುವುದಂತೂ ಎಲ್ಲಕ್ಕೂ ಹೆಚ್ಚಿನ ಉಪಾಯವು (೩ ೩೬).ಬರೀ ಬಾಯಿಯಿಂದ ವೈರಾಗ್ಯದ ಮಾತುಗಳನ್ನಾಡಿದರೆ ಪ್ರಯೋಜನವಿಲ್ಲ. ಕೈವಲ್ಯಕಲ್ಪವಲ್ಲರಿಯಲ್ಲಿ ಹೇಳಿದಂತೆ

**ಶರೀರದಾಶೆಯಿಲ್ಲದುದಕೆ ಮರಣಕಂಜದಿಹುದೆ ಸಾಕ್ಷಿ ।**
**ವಿರತಿಬಲಿದುದಕೆ ಭೋಗಕೆರಗದಿಹುದೆ ಸಾಕ್ಷಿ ।**
**ಕರಣವಿಜಯವಾದುದಕೆ ಹರಿಯದಿಂದ್ರಿಯಗಳೆ ಸಾಕ್ಷಿ ॥**

ಈ ಬಗೆಯಾಗಿ, ಕರ್ಮಯೋಗದ ನಿಷೇಧಾತ್ಮಕ ಅಂಗವಾದ ಸಂನ್ಯಾಸದ ಸಂಕ್ಷಿಪ್ತವಿವರಣೆಯಾಯಿತು.

## ೧೧ನೆಯ ಪ್ರಕರಣ

# ಯೋಗ ಅಥವಾ ಈಶ್ವರಾರ್ಪಣ ಬುದ್ಧಿ

**ಕೊಡುವುದೆಲ್ಲವು ನಿನಗೆ ಕಪ್ಪವು ।**
**ಉಡುವುದೆಲ್ಲವು ನಿನಗೆ ವಸನವು ।**
**ಬಿಡದೆ ಉಂಡುಣಿಸಿದ್ದು ನಿನಗದೆ ಊಟವೆಂಬುವರೋ ।**

**ನುಡಿವ ಮಾತುಗಳೆಲ್ಲ ಮಂತ್ರವು ।**
**ಅಡಿಗಡಿಗೆ ತಿರುಗುವುದೆ ಯಾತ್ರೆಯು ।**
**ಕಡಲಶಯನನೆ ಶಯನವೇ ನಿನ್ನಡಿ ನಮಸ್ಕಾರ ॥**

— ಕನಕದಾಸರು

ಕರ್ಮಯೋಗದ ಎರಡು ಅಂಶಗಳಲ್ಲಿ ಒಂದಾಗಿರುವ ಸಂನ್ಯಾಸ ಅಥವಾ ನಿಷ್ಕಾಮಕರ್ಮವನ್ನು ಕುರಿತು ಹೋದ ಪ್ರಕರಣದಲ್ಲಿ ಚರ್ಚಿಸಿದೆವು. ಇನ್ನು ಈ ಪ್ರಕರಣದಲ್ಲಿ ಅದರ ಎರಡನೆಯ ಅಂಶವಾದ ಯೋಗವನ್ನು ಕುರಿತು ಯೋಚಿಸುವೆವು.

ಯೋಗವೆಂದರೆ ಈಶ್ವರಾರ್ಪಣ ಬುದ್ಧಿ. ಈಶ್ವರನಲ್ಲಿ ಮನಸ್ಸನಿಡುವ ಉಪಾಯಕ್ಕೆ ಯೋಗವೆನ್ನುವರು. ನಿಷ್ಕಾಮಕರ್ಮವು ಅತ್ಯಂತ ರೂಢಿಯೊಳಗಿರುವ ಶಬ್ದವು. ಗೀತೆಯೆಂದರೆ ನಿಷ್ಕಾಮಕರ್ಮ, ನಿಷ್ಕಾಮಕರ್ಮವೆಂದರೆ ಗೀತೆ ಎಂದೆನ್ನುವಷ್ಟು ಮಟ್ಟಿಗೆ ಅದು ಬಳಕೆಯಲ್ಲಿ ಬಂದಿದೆ. ಆದರೆ, ನಿಜವಾಗಿ ವಿಚಾರಮಾಡಿ ನೋಡಿದರೆ, ನಿಷ್ಕಾಮತೆಯು ಕರ್ಮಯೋಗದ ಒಂದು ಅಂಗಮಾತ್ರವಾದ ಸಂನ್ಯಾಸದಲ್ಲಿ ಸೇರುತ್ತದೆ. ಆದಕಾರಣ ಗೀತೆಯು ನಿಷ್ಕಾಮಕರ್ಮವನ್ನು ಬೋಧಿಸುತ್ತದೆಂಬುದು ಏಕದೇಶೀಯವಾದ ವಿಧಾನವು. ಕರ್ಮಯೋಗದ ಎರಡನೆಯ ಅಂಶವಾದ ಯೋಗವು ಈ ಸಂನ್ಯಾಸಕ್ಕಿಂತ ಹೆಚ್ಚಿನದು. ಏಕೆಂದರೆ, ಸಂನ್ಯಾಸವು ಅಥವಾ ನಿಷ್ಕಾಮತೆಯು ನಿಷೇಧಾತ್ಮಕವಾದ ಉಪದೇಶವು. ಯೋಗವು ವಿಧಾಯಕವಾದ ಉಪದೇಶವು. ಸಂನ್ಯಾಸವು ಏನನ್ನು ಮಾಡಬಾರದೆಂಬುದನ್ನು ಹೇಳುತ್ತದೆ. ಯೋಗವು

ಏನನ್ನು ಮಾಡಬೇಕೆಂಬುದನ್ನು ಹೇಳುತ್ತದೆ ಮನಸ್ಸಿನೊಳಗಿರುವ ವಿಷಯ ಕಾಮನೆಯನ್ನು ಹೊರಗಟ್ಟಿದ ಬಳಿಕ, ಅದರಲ್ಲಿ ಪರಮಾತ್ಮ ವಿಷಯಕವಾದ ವಿಚಾರಗಳನ್ನು ತುಂಬಬೇಕು. ಎಂದರೆ ಮಾತ್ರವೇ ಮನುಷ್ಯನಿಗೆ ನಿಜವಾದ ಆನಂದವುಂಟಾಗುತ್ತದೆ (೨.೬೧). ನಿತ್ಯದಲ್ಲಿ ಪರಮಾತ್ಮನಲ್ಲಿ ಮನಸ್ಸನ್ನಿಡಬೇಕು ಪರಮಾತ್ಮನ ಭಕ್ತಿಯನ್ನು ಮಾಡ ಬೇಕು, ಪರಮಾತ್ಮನನ್ನೇ ಪೂಜಿಸಬೇಕು, ಆತನಿಗೆ ನಮಸ್ಕಾರ ಮಾಡ ಬೇಕು (೧೮.೬೫). ಪ್ರತಿಯೊಂದು ಕರ್ಮ ಮಾಡುವಾಗ ಈಶ್ವರನನ್ನು ನೆನಸಬೇಕು. ಯೋಗಸ್ಥನಾಗಿ ಪ್ರತಿಯೊಂದು ಕರ್ಮವನ್ನೂ ಮಾಡ ಬೇಕು (೨.೪೮). 'ಕರ್ಮಗಳ ಕಾಮಾರ್ಥ ಮಾಡದಿರು' ಎಂದು ಹೇಳಿ ದಂತೆಯೇ 'ಅವಶನಾಗಿ ಕರ್ಮಮಾಡು । ಮಾ । ಧವನ ಪಾಹನನೆಂದು ನಲಿದಾಡು' ಎಂದು ಕನಕದಾಸರು ಹೇಳಿರುವರು. ದೇಹವು ದೇವರ ರಥವು; ಶರೀರವು ದೇಗುಲವು-ಎಂಬ ಭಾವನೆಯಿಂದ ಕರ್ಮಮಾಡಬೇಕು. ಅದೇ ಈಶ್ವರಾರ್ಪಣ ಬುದ್ಧಿ. ಪರಮಾತ್ಮನಲ್ಲಿ ಮನೋಯೋಗವುಳ್ಳವ ರಾಗಿ, ಆತನಿಗೆ ಕರ್ಮಗಳನ್ನು ಸಮರ್ಪಿಸಬೇಕು (೪.೪೧). ಕೇವಲ ಸಂನ್ಯಾಸಕ್ಕೆ ಫಲವಿಲ್ಲ. ಅದು ಯೋಗದಿಂದ ಎಂದರೆ ಈಶ್ವರಾರ್ಪಣ ಬುದ್ಧಿಯಿಂದ ಕೂಡಿದ್ದರೇನೇ ಬ್ರಹ್ಮಪ್ರಾಪ್ತಿ (೫.೬). ಕರ್ಮಗಳನ್ನು ಬ್ರಹ್ಮನಿಗೆ ಸಮರ್ಪಿಸಿ, ಫಲೇಚ್ಛೆಯನ್ನು ಬಿಟ್ಟು ಕರ್ಮಮಾಡಿದರೇನೇ ಕರ್ಮಲೇಪವಿಲ್ಲ (೫.೧೦). ಭಗವತ್ಪ್ರೀತ್ಯರ್ಥವಾಗಿ ಮಾಡಲ್ಪಟ್ಟ ಕರ್ಮಕ್ಕೆ ಮಾತ್ರ ಬಂಧವಿಲ್ಲ (೩.೯). ನಮ್ಮಲ್ಲಿ ಪ್ರತಿಯೊಂದು ಕೆಲಸದ ಕೊನೆಗೆ ಶ್ರೀಕೃಷ್ಣಾರ್ಪಣಮಸ್ತು ಎಂದೆನ್ನುವ ಸಂಪ್ರದಾಯವಿರುವುದ ಲ್ಲವೆ? ಅದೇ ಯೋಗದ ಸೂಚಕವು. ಸಕಲಕರ್ಮಗಳನ್ನು ಭಗವ ದರ್ಪಣ ಮಾಡುವುದೆಂದರೇನು ? ಹಾಗೆ ಭಗವದರ್ಪಣಮಾಡುವುದೆಂ ದರೆ ಸಕಲಜಗತ್ತಿನ ಸೃಷ್ಟಿಸ್ಥಿತಿಲಯಾದಿಗಳ ಕರ್ತನು ಪರಮಾತ್ಮನು; ಆತನು ಪ್ರಾಣಿಗಳ ಹೃದಯಗುಹೆಯಲ್ಲಿ ಇದ್ದುಕೊಂಡು ಈ ಯಂತ್ರ ವನ್ನು ತಿರುಗಿಸುತ್ತಾನೆ (೧೮.೬೧)–ಎಂದು ಮುಂತಾಗಿ ಭಾವಿಸು ವುದು ಮತ್ತು ಆತನ ಧ್ಯಾನಪರರಾಗುವುದು.

ಮೋಕ್ಷ ಅಥವಾ ಸ್ವಾತಂತ್ರ್ಯವೆಂಬುದು ಒಂದು ಪ್ರತ್ಯೇಕವಾದ

ವಸ್ತುವಲ್ಲ. ಅದು ಆತ್ಮಿಕ ಸುಖದ ಅನುಭವದ ಸ್ಥಿತಿ. ಮುಕ್ತರಿಗೂ ಬದ್ಧರಿಗೂ ಇಬ್ಬರಿಗೂ ಶರೀರಗಳಿರುತ್ತವೆ, ಮನಸ್ಸುಗಳಿರುತ್ತವೆ, ಆತ್ಮ ಗಳಿರುತ್ತವೆ. ಮುಕ್ತನು ಅವುಗಳನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡಿ ರುತ್ತಾನೆ, ಬದ್ಧನು ಅವುಗಳಿಗೆ ಅಧೀನನಾಗಿರುತ್ತಾನೆ. ಮುಕ್ತನ ಕಲ್ಪ ನೆಯು ತೀವ್ರ ಆಕಲನಕ್ಕೆ ಬಾರದಿದ್ದರೆ ಅದನ್ನು ಬಿಟ್ಟುಕೊಡುವ. ಮುಕ್ತಸ್ಥಿತಿಗೆ ತೀರ ಸಮೀಪದಲ್ಲಿದ್ದ ಸ್ಥಿತಿಯೆಂದರೆ ಸ್ಥಿತಪ್ರಜ್ಞನ ಸ್ಥಿತಿ, ಯೋಗಾರೂಢನ ಸ್ಥಿತಿ, ಗುಣಾತೀತನ ಸ್ಥಿತಿ, ಭಕ್ತನ ಸ್ಥಿತಿ. ಇವೆಲ್ಲವೂ ಬಹುಶಃ ಪರ್ಯಾಯ ಶಬ್ದಗಳೇ. ಇವೆಲ್ಲವುಗಳ ವರ್ಣನೆಯು ಗೀತೆಯಲ್ಲಿ ಬಂದಿದೆ (೨.೫೩ ರಿಂದ ೭೨; ೬.೩, ೪; ೧೪.೨೨ ರಿಂದ ೨೭; ೧೨.೧೩ ರಿಂದ ೨೦). ಅವುಗಳಲ್ಲಿ ಬಂದಿರುವ ವರ್ಣನೆಗಳನ್ನೋದಿದರೆ ಅವುಗಳಲ್ಲಿ ಸಂನ್ಯಾಸವೂ ಯೋಗವೂ ಹೇಗೆ ಕೂಡಿರುತ್ತವೆಂಬುದು ಗೊತ್ತಾಗು ವುದು. ಅವುಗಳಲ್ಲಿ, ಸಂನ್ಯಾಸಕ್ಕೆ ಅವಶ್ಯವಾಗಿರುವ ಕಾಮತ್ಯಾಗ, ಫಲತ್ಯಾಗ, ಸುಖದುಃಖ ಸಮತ್ವ ಇವೇ ಮುಂತಾದವುಗಳು ಬಂದಿರು ವುವಲ್ಲದೆ ಯೋಗವೂ ಬಂದಿದೆ. ಅಯುಕ್ತನಿಗೆ ಅಂದರೆ ಚಿತ್ತನಿರೋಧ ವನ್ನು ಮಾಡಲಿಕ್ಕೆ ಬಾರದಿದ್ದವನಿಗೆ ಭಾವನೆಯು ಎಂದರೆ ಪರಮಾತ್ಮನ ಧ್ಯಾನವು ಇಲ್ಲವೆಂದು ಹೇಳಿದೆ (೨.೬೬); ಜಿತಮನಸ್ಕನೂ ಪ್ರಶಾಂತನೂ ಆದವನ ಮನಸ್ಸಿನಲ್ಲಿ ಪರಮಾತ್ಮನು ಸದಾ ಇರುತ್ತಾನೆ (೬.೭); ತ್ರಿಗುಣಗಳನ್ನು ಮೀರಿದವನನ್ನು ಎಂದರೆ ತ್ರಿಗುಣಗಳಿಗಿಂತ ಶ್ರೇಷ್ಠನಾದ ವನನ್ನು ಯಾವಾಗ ಅರಿಯುವನೋ ಆಗ ಗುಣಾತೀತನಾಗುವನು (೧೪.೧೯); ಭಗವಂತನೇ ಸರ್ವೋತ್ತಮನೆಂದು ಬಗೆಯುವ ಶ್ರದ್ಧಾಳು ಗಳಾದ ಭಕ್ತರು ಆತನಿಗೆ ಅತ್ಯಂತ ಪ್ರಿಯರು (೧೨.೨೦). ಈ ಪ್ರಕಾರ ವಾಗಿ ಕೇವಲ ಸಂನ್ಯಾಸಕ್ಕಿಂತಲೂ ಈ ಯೋಗಕ್ಕೆ ಹೆಚ್ಚಿಗೆ ಬೆಲೆಯಿದೆ. ಪರಮಾತ್ಮನಲ್ಲಿ ಯೋಗಯುಕ್ತವಾಗದಿದ್ದ ಸಂನ್ಯಾಸಕ್ಕೆ ಬೆಲೆ ಇಲ್ಲ. ಕೇವಲ ಕಾಮಾದಿಗಳನ್ನು ಬಿಟ್ಟರೆ ಸಾಲದು. ಈಶ್ವರಾರ್ಪಣ ಬುದ್ಧಿ ಯಿಂದ ಕರ್ಮಾನುಷ್ಠಾನವೂ ಬೇಕು. ಅದೇ ಯೋಗವು. 'ಯೋಗದಿಂದ ಕೂಡಿರದಿದ್ದರೆ ಕೇವಲ ಸಂನ್ಯಾಸವು ಅಷ್ಟೊಂದು ಫಲಕಾರಿಯಾಗಲಾ ರದು; ಅದು ಯೋಗದಿಂದ ಕೂಡಿದ್ದರೆ ಸಂನ್ಯಾಸಿಯು ಬ್ರಹ್ಮನನ್ನು

ತೀವ್ರವೇ ಹೊಂದುತ್ತಾನೆ (೫.೬). ಆದಕಾರಣವೇ ಗೀತೆಯಲ್ಲಿ, ಮೇಲಿಂದ ಮೇಲೆ ಪರಮಾತ್ಮನಲ್ಲಿ ಮನಸ್ಸನ್ನಿಡುವುದಕ್ಕೆ ಉಪದೇಶವಿರುತ್ತದೆ. 'ಪರಮಾತ್ಮನಲ್ಲಿಯೇ ಬುದ್ಧಿಯನ್ನಿಡು, ಮನಸ್ಸನ್ನಿಡು, ಭಕ್ತಿಯನ್ನಿಡು, ಮತ್ತು ಆತನಲ್ಲಿಯೇ ಮಗ್ನನಾಗು (೧೮.೬೫); ಹೀಗೆ ಮಾಡುವವರು ಜ್ಞಾನದಿಂದ ಪಾಪವನ್ನು ಕಳೆದುಕೊಂಡು ಮತ್ತೆ ಹುಟ್ಟದ ಸ್ಥಿತಿಯನ್ನು ಹೊಂದುತ್ತಾರೆ (೫.೧೭). ಸಂನ್ಯಾಸಕ್ಕಿಂತ ಯೋಗವು ಏಕೆ ಹೆಚ್ಚಿನದೆಂದರೆ 'ಬಾಹ್ಯವಿಷಯಗಳಲ್ಲಿ ತೊಡಗದಿದ್ದ ಮನಸ್ಸುಳ್ಳ ಸಂನ್ಯಾಸಿಯು ತನ್ನಲ್ಲಿ ಯಾವ ಸುಖವನ್ನು ಹೊಂದುತ್ತಾನೋ, ಅವನೇ ಯೋಗದಲ್ಲಿ ಅಂದರೆ ಪರಮಾತ್ಮ ಧ್ಯಾನದಲ್ಲಿ ಮಗ್ನನಾದನೆಂದರೆ ಅಕ್ಷಯವಾದ ಸುಖವನ್ನು ಅನುಭವಿಸುತ್ತಾನೆ (೫.೨೧). ಯೋಗಿಯು ತನ್ನೊಳಗೆ ತಾನೇ ಸಂತೋಷಪಡುತ್ತಿರುತ್ತಾನೆ, ಆರಾಮವನ್ನು ಪಡೆಯುತ್ತಿರುತ್ತಾನೆ, ಒಳಬೆಳಕಿನಲ್ಲಿಯೇ ಇರುತ್ತಾನೆ. ಅಂಥ ಯೋಗಿಯು ಬ್ರಹ್ಮನಲ್ಲಿಯೇ ಸದಾ ಇದ್ದವನಾಗಿ ಕೊನೆಗೆ ಆ ಅಶರೀರನಾದ ಬ್ರಹ್ಮನನ್ನು ಹೊಂದುತ್ತಾನೆ (೫.೨೪). ಸಾರಾಂಶ, ಪರಮಾತ್ಮನಿಗೆ ಸರ್ವಕರ್ಮಗಳನ್ನು ಅರ್ಪಿಸುವುದು ಕರ್ಮಯೋಗದ ಮುಖ್ಯಭಾಗವು. ಕರ್ಮಗಳನ್ನು ಅರ್ಪಿಸುವುದೆಂದರೆ ಆತನೇ ಸ್ವಾಮಿ, ಆತನೇ ಕರ್ತನು ನಾನು ಕರ್ತನಲ್ಲವೆಂಬ ಭಾವನೆಯನ್ನಿಡುವುದು.

ಈ ಯೋಗದ ಮಹತ್ವವನ್ನು ಒಂದು ಲೌಕಿಕ ಉದಾಹರಣೆಯಿಂದ ಸ್ಪಷ್ಟಗೊಳಿಸಬಹುದು. ಸಾಮ್ರಾಜ್ಯಕ್ಕೆ ಒಬ್ಬ ರಾಜನಿರುತ್ತಾನಷ್ಟೆ. ಆತನ ಕೈಕೆಳಗೆ ಒಬ್ಬ ಶಿಪಾಯಿಯು ಮೊದಲ್ಗೊಂಡು ಗವ್ಹರ್ನರ ಜನರಲ್‌ನ ವರೆಗೆ ಭಿನ್ನ ಭಿನ್ನ ತರಗತಿಯ ಅಧಿಕಾರಿಗಳಿರುತ್ತಾರೆ. ಅವರೆಲ್ಲರೂ ತಮತಮಗೆ ವಿಹಿತವಾದ ಭಿನ್ನಭಿನ್ನ ಕರ್ಮಗಳನ್ನು ಮಾಡುತಿರುತ್ತಾರೆ, ಭಿನ್ನಭಿನ್ನ ಅಧಿಕಾರಗಳನ್ನು ನಡಿಸುತ್ತಿರತ್ತಾರೆ. ಆದರೆ, ಆ ಕರ್ಮಗಳನ್ನು ಮಾಡುವಾಗ, ಆ ಅಧಿಕಾರವನ್ನು ನಡಿಸುವಾಗ ಕರ್ಮಗಳನ್ನು ನಾನು ಸ್ವತಂತ್ರವಾಗಿ ಮಾಡುತ್ತೇನೆ,ಆ ಅಧಿಕಾರವನ್ನು ನಾನು ಸ್ವತಂತ್ರವಾಗಿ ನಡಿಸುತ್ತೇನೆ – ಎಂಬ ಭಾವನೆಯು ಹುಟ್ಟಿತೆಂದರೆ ಮನುಷ್ಯನು ಹಾಳಾದನೆಂದೇ ತಿಳಿಯಬೇಕು. ಹಾಗೆ ತಿಳಿಯದೆ, ಪ್ರತಿ

ಕ್ಷಣಕ್ಕೆ ತಾನು ಮಾಡುವ ಕರ್ಮವು ತನ್ನದಲ್ಲ, ತಾನು ನಡಿಸುವ ಅಧಿಕಾರವು ತನ್ನದಲ್ಲ, ಅದಕ್ಕೆ ಸ್ವಾಮಿಯು ಬೇರೊಬ್ಬನಿರುವನು. ತಾನು ಆತನ ಸೇವಕನು ಎಂಬ ಭಾವನೆಯನ್ನಿಡುವುದೆಂದರೇನೇ ಯೋಗವು, ಅದೇ ಈಶ್ವರಾರ್ಪಣ ಬುದ್ಧಿಯು. ಇದೇ ಬೆಳೆದು ಪರಿಪಕ್ವರೂಪವನ್ನು ಹೊಂದುತ್ತದೆ. ದೇವರ ದಾಸನಾಗುವುದಕ್ಕೆ ನಾಚಿ ಪ್ರಯೋಜನವಿಲ್ಲ. ದೇವರ ದಾಸ್ಯವು ದಾಸ್ಯವಲ್ಲ. ಅದಕಾರಣವೇ ದಾಸರೆಲ್ಲರೂ ಈ ಬಗೆಯ ದಾಸ್ಯವನ್ನು ಕೊಂಡಾಡಿದ್ದಾರೆ.

**ಹೇರು ಒಪ್ಪಿಸಿಕೊಟ್ಟ ಬಳಿಕ ವಿ।**
**ಚಾರರವೇ ಸುಂಕಕ್ಕೆ, ಎನ್ನ ಶ।**
**ರೀರವೇ ಚರಣಾರವಿಂದಕ್ಕೆ ಅರ್ಪಿಸಿದ ಬಳಿಕ॥**

ಎಂಬುದಾಗಿ ಕನಕದಾಸರು ಇದರ ಮಹಿಮೆಯನ್ನು ವರ್ಣಿಸಿರುವರು. 'ಏನು ಮಾಡುವ ಕರ್ಮಗಳು ಲ। ಕ್ಷ್ಮೀನಿವಾಸಗರ್ಪಿಸನುಸಂ। ಧಾನಪೂರ್ವಕದಿ। ಎಂದು ಜಗನ್ನಾಥದಾಸರು ಪಾಡಿದ್ದಾರೆ.

**ಮಾಡಿ ದಣಿಯರು ನಿತ್ಯದಲಿ ಕೊಂ।**
**ಡಾಡಿ ದಣಿಯರು ನಿನ್ನ ಮೂರ್ತಿಯ।**
**ನೋಡಿ ದಣಿಯರು ಪೂಜೆಗಳ್ ತಾವ್ ಮಾಡಿ, ಮನದೊಳಗೆ।**
**ಗಾಡಿಕಾರನೆ ರೂಢಿಯಲಿ ನಾ।**
**ಡಾಡಿ ದೈವಗಳನ್ನು ಭಜಿಸರು।**
**ಬೇಡುವರೋ ಕಲ್ಪಾಂತಕಾದರು ನಿನ್ನ ದಾಸತ್ವ॥**

ಎಂದು ಕನಕದಾಸರು ದಾಸತ್ವವನ್ನು ಕೇಳಿಕೊಂಡಿದ್ದಾರೆ. ಅದಕಾರಣ ಶ್ರೀಕೃಷ್ಣನು ಪುನಃ ಪುನಃ 'ನನ್ನಲ್ಲಿ ಮನಸ್ಸಿಡು, ನನ್ನನ್ನು ಪೂಜಿಸು, ನಮಸ್ಕಾರ ಮಾಡು, ನನ್ನನ್ನು ಆಶ್ರಯಿಸು–ಹೀಗೆ ನನ್ನಲ್ಲಿಯೇ ಮಗ್ನನಾದರೆ ನನ್ನ ಕಡೆಗೇ ಬರುವಿ (೯ ೩೪; ೧೮.೬೫). ಎಂದು ಹೇಳಿರುವನು. 'ನೀನು ಪರಮಾತ್ಮನಾದ ನನ್ನಲ್ಲಿ ಮನಸ್ಸಿಟ್ಟವನಾಗಿ ಎಲ್ಲ ಕರ್ಮಗಳನ್ನೂ ನನಗೆ ಸಮರ್ಪಿಸಿ, ಬಯಕೆ ಮತ್ತು ನಿನ್ನದೆಂಬ ಅಭಿಮಾನ ಇವುಗಳನ್ನು ತೊರೆದು, ಮನಗುದಿಯನ್ನು ಬಿಟ್ಟು ಯುದ್ಧಮಾಡು ಎಂದು ಹೇಳಿದ್ದಾನೆ (೩.೩೦).

ಇದರಿಂದ, ಯೋಗವು ಕರ್ಮಯೋಗದಲ್ಲಿ ಎಷ್ಟು ಮಹತ್ವವುಳ್ಳ ಭಾಗವೆಂಬುದು ಗೊತ್ತಾಗುವುದು.

---

## ೧೨ನೆಯ ಪ್ರಕರಣ

# ಭಕ್ತಿಯೆಂದರೇನು ?

**ಭಕುತಿಯ ಪಾಲಿಸು ಜೀಯಾ, ಮುಂದೆ ।**
**ಮೂಕುತಿಗೊಡವೆ ಯಾಕೆ ನೀನೊಲಿದ ಮೇಲೆ ।**

**— ವಿಜಯದಾಸರು**

ಪರಮಧರ್ಮದ ಎರಡು ಅಂಗಗಳಾದ ಸರ್ವವೂ ಪರಮಾತ್ಮನ ಅಧೀನವೆಂಬ ತತ್ವವನ್ನೂ ಸ್ವವಿಹಿತವೃತ್ತಿಯೆಂದರೇನೆಂಬ ತತ್ವವನ್ನೂ ಕುರಿತು ಇಲ್ಲಿಯವರೆಗೆ ವಿಚಾರವಾಯಿತು. ಇನ್ನು ಈ ಪ್ರಕರಣದಲ್ಲಿ, ಪರಮಧರ್ಮದ ಮೂರನೆಯ ಅಂಗವಾದ ಭಕ್ತಿಯನ್ನು ಕುರಿತು ಯೋಚಿಸತಕ್ಕದ್ದಿದೆ.

ಯಾವುದೊಂದು ಕಾರ್ಯಕ್ಕೆ ಪರಮಧರ್ಮದ ಸ್ವರೂಪವು ಬರಬೇಕಾದರೆ ಆ ಕಾರ್ಯವು ಭಕ್ತಿಪೂರ್ವಕವಾಗಿ ಮಾಡಲ್ಪಟ್ಟದ್ದಾಗಿರಬೇಕು. ಇಲ್ಲದಿದ್ದರೆ ಆ ಕಾರ್ಯವು ಪರಮಧರ್ಮವಾಗಲಾರದು. ಹೀಗೆ ಹೇಳುವುದಕ್ಕೇನು ಕಾರಣವೆಂಬುದನ್ನು ನೋಡುವ. ಭಕ್ತಿಯೆಂದರೆ ಮಾಹಾತ್ಮ್ಯಜ್ಞಾನಪೂರ್ವಕವಾದ ಸುದೃಢಸ್ನೇಹವೆಂದು ಸ್ವಲ್ಪದರಲ್ಲಿ ಹೇಳಬಹುದು. ಎಂದರೆ, ಯಾವನ ವಿಷಯದಲ್ಲಿ ನೀವು ಭಕ್ತಿಯುಳ್ಳವರಾಗುವಿರೋ ಅವರು ದೊಡ್ಡವರು, ಅವರು ಏಕೆ ದೊಡ್ಡವರು ಇವೇ ಮುಂತಾದ ಸಂಗತಿಗಳು ನಿಮಗೆ ಗೊತ್ತಿರಬೇಕು, ಮತ್ತು ಇಂಥ ಜ್ಞಾನವಿದ್ದು, ಆ ಮೂಲಕ ಅವರಲ್ಲಿ ನಿಮಗೆ ಸುದೃಢವಾದ ಪ್ರೇಮವು ಹುಟ್ಟಿದರೆ ಆಗ ಅದು ಭಕ್ತಿಯೆನ್ನಿಸುತ್ತದೆ. ಭಕ್ತಿಯೆಂಬುದು ಪ್ರೇಮವಿಶೇಷವು. ಆ ಪ್ರೇಮವಿಶೇಷದ ಮೂಲಕ, ಮನುಷ್ಯನು ಆ ದೊಡ್ಡವರ, ಸೇವೆ, ಪೂಜೆ ಅರ್ಚನಾದಿಗಳನ್ನು ಮಾಡಲಿಕ್ಕೆ ಪ್ರವೃತ್ತನಾಗು

ತ್ತಾನೆ. ಆದರೆ, ಅವೇನೂ ಮುಖ್ಯ ಅಂಗಗಳಲ್ಲ. ಆ ಪ್ರೇಮವು ಆ ರೂಪದಲ್ಲಿ ಹೊರಬೀಳುತ್ತದೆ, ಇಷ್ಟೇ. ಎಂದರೆ, ಸೇವಾಸ್ತೋತ್ರಾದಿಗಳು ಆ ಭಕ್ತಿಯ ಲಕ್ಷಣಗಳು. ಪ್ರೇಮಾತಿಶಯದ ಸ್ವಾಭಾವಿಕವಾದ ಪರಿಣಾಮಗಳು ಅವು. ಅವು ಮನಸ್ಸಿನಲ್ಲಿ ತಾನಾಗಿಯೇ ಹುಟ್ಟತಕ್ಕವುಗಳು. ಇದರಿಂದ, ಅಂಧಭಕ್ತಿಗೆ ಅಥವಾ ಮೂಢಭಕ್ತಿಗೆ ನಮ್ಮವರು ಅಷ್ಟೊಂದು ಬೆಲೆಕೊಡುವುದಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಪರಮಾತ್ಮನ ಅನಂತಾನಂತ ಗುಣಗಳನ್ನರಿಯಬೇಕು, ಮತ್ತು ಆತನಲ್ಲಿ ಮಿಕ್ಕ ಎಲ್ಲರಿಗಿಂತಲೂ ಹೆಚ್ಚಿನ ಸ್ನೇಹ ಉಂಟಾಗಿರಬೇಕು. ತನ್ನ ದೇಹ, ಹೆಂಡಿರು, ಮಕ್ಕಳು, ಮನೆಮಾರು ಇವೇ ಮುಂತಾದವುಗಳ ಮೇಲೆ ತನಗೆ ಎಷ್ಟು ಪ್ರೇಮವಿರುತ್ತದೆಯೋ ಅದಕ್ಕಿಂತ ಅಧಿಕವಾದ ಪ್ರೇಮವು ಪರಮಾತ್ಮನಲ್ಲಿ ಇರಬೇಕು. ಆಂದರೆ ಮಾತ್ರ ಅದಕ್ಕೆ ಭಕ್ತಿಯೆಂಬ ಹೆಸರು ಸಲ್ಲುತ್ತದೆ. ಈ ಭಕ್ತಿಯಲ್ಲಿ ಸಾಮಾನ್ಯವಾಗಿ ಮೂರುತರಹದ ದೋಷಗಳುಂಟಾಗುವ ಸಂಭವವಿದೆ. ಭಕ್ತಿಯು ನಡುನಡುವೆ ವಿಚ್ಛಿನ್ನವಾಗುವ ಸಂಭವವಿದೆ. ಆಗ ಅದು ಪೂರ್ಣ ಅಥವಾ ಪರಿಪಕ್ವ ಭಕ್ತಿಯೆನ್ನಿಸಲಾರದು. ಭಕ್ತಿಯು ಅವಿಚ್ಛಿನ್ನವಾಗಿರಬೇಕು, ವ್ಯವಧಾನರಹಿತವಾಗಿರಬೇಕು. ತೈಲಧಾರೆಯಂತೆ ಭಕ್ತಿಯ ಕೊಡೆಂದು ದಾಸರು ಬೇಡಿಕೊಂಡಿರುವರು. ಭಕ್ತಿಯಲ್ಲಿಯ ಎರಡನೆಯ ದೋಷವೆಂದರೆ ಅದು ವ್ಯಭಿಚರಿತವಾಗಿರುವ ಸಂಭವವಿದೆ, ಎಂದರೆ ಪರಮಾತ್ಮನ ಹೊರತು ಮಿಕ್ಕ ಕಡೆಗೆ ಮನಸ್ಸು ಹರಿದುಹೋಗುವ ಸಂಭವವಿದೆ. ಅದು ಪರಿಶುದ್ಧವಾದ ಭಕ್ತಿಯಲ್ಲ.

> 'ನಿನ್ನ ಕೃಪೆಯೊಂದಲ್ಲದೇ ಮ |
> ತ್ತನ್ಯವಸ್ತುಗಳನ್ನು ಬೇಡೆನೋ |
> ಘನ್ನಗುಣಸಂಪನ್ನ ಸಿರಿಮೋಹನ್ನ ನೀನೆನ್ನ |
> ಪುಣ್ಯನಿಧಿ ಪಾವನ್ನ ಪತಿಕರಿ |
> ಸೆನ್ನ ದುರ್ಗುಣವನ್ನು ಎಣಿಸದೆ |
> ನಿನ್ನ ಮಹಿಮೆಗಳನ್ನೇ ಪಾಡುವುದನ್ನೆ ದಯಮಾಡೋ ||

ಎಂದು ಕನಕದಾಸರು ಕೇಳಿಕೊಂಡಿರುವರು. ಭಕ್ತಿಯಲ್ಲಿಯ ಮೂರನೆಯ ದೋಷವೆಂದರೆ ಅದು ಸಹೇತುಕವಾಗಿರುವುದು. ಅದಕ್ಕೆ

ಕಾಮ್ಯಭಕ್ತಿಯೆನ್ನಬಹುದು. ನಿಜವಾದ ಭಕ್ತರು ಮೋಕ್ಷವನ್ನು ಕೊಡೆಂದು ಕೂಡ ದೇವರನ್ನು ಬೇಡುವುದಿಲ್ಲ. ಕೇವಲ ಆತನ ದಾಸ್ಯದಲ್ಲಿಯೇ ತೃಪ್ತರಾಗಿರುತ್ತಾರೆ.

**ಹಗಲ ನಂದಾದೀಪದಂದದಿ । ನಿಗಮವೇದ್ಯನ ಪೂಜಿಸುತ ಕೈ ।**
**ಮುಗಿದು ನಾಲ್ಕರೊಳೊಂದು ಪುರುಷಾರ್ಥವನು ಬೇಡದಲೆ ॥**
**ಜಗದುದರ ಕೊಟ್ಟದನು ಭುಂಜಿಸು.........**

ಎಂಬುದಾಗಿ ಜಗನ್ನಾಥದಾಸರು ಬೇಡಿಕೊಂಡಿರುವರು. ಸಾರಾಂಶ, ಈ ತ್ರಿದೋಷಗಳಿಂದ ವರ್ಜಿತವಾದ ಭಕ್ತಿಯೇ ಶುದ್ಧಭಕ್ತಿ. ಆದರೆ, ಇಂಥ ಪರಿಪಕ್ವ ಭಕ್ತಿಯು ಒಮ್ಮೆಲೆ ಸಾಧ್ಯವಿಲ್ಲವಷ್ಟೆ. ಆದಕಾರಣ, ಮುಂಚೆ, ಪರಮಾತ್ಮನಲ್ಲಿ ಅಂಧಭಕ್ತಿಯಿಂದಲೇ ಪ್ರಾರಂಭಿಸಬೇಕಾಗುತ್ತದೆ. ಅದು ದಿನದಿನಕ್ಕೆ ಪಕ್ವವಾಗುತ್ತ ಹೋಗುತ್ತದೆ.

ಭಕ್ತಿಯು ಪರಮಧರ್ಮಕ್ಕೆ ಏಕೆ ಅವಶ್ಯವೆಂಬ ಅಂಶವನ್ನು ಅರಿತುಕೊಳ್ಳಬೇಕು. ನಾವು ನಮ್ಮ ಕರ್ತವ್ಯಕರ್ಮವನ್ನು ನಿಷ್ಕಾಮಬುದ್ಧಿಯಿಂದ ಮಾಡಿದರಾಯಿತು. ನಮಗೆ ಅದರ ಫಲವು ದೊರಕಲೇಬೇಕು. ಭಕ್ತಿಯ ಆವಶ್ಯಕತೆಯೇನೂ ಇಲ್ಲವೆಂದು ಹೇಳುವವರು ಅನೇಕರಿದ್ದಾರೆ. ಸ್ವವಿಹಿತವೃತ್ತಿಯೊಂದು ಸಾಕು, ಭಕ್ತಿಯು ಬೇಡವೆಂದು ಅವರ ಅಂಬೋಣ. ಆದರೆ ಇದು ಉಚಿತವಲ್ಲ. ಭಕ್ತಿಯಿಲ್ಲದಿದ್ದರೆ ಪರಮಧರ್ಮವು ಪೂರ್ಣವಾಗಲಾರದೆಂದು ಗೀತೆಯ ಸ್ಪಷ್ಟವಾದ ಅಭಿಪ್ರಾಯವಿದೆ. ಇದಕ್ಕೆ ಕಾರಣವೇನೆಂದರೆ, ಪರಮಾತ್ಮನಲ್ಲಿ ಭಕ್ತಿಯಿಲ್ಲದವರಿಂದ ನಿಷ್ಕಾಮ ಕರ್ಮಗಳು ಯಥಾಸಾಂಗವಾಗಿ ಜರಗುವುದು ಶಕ್ಯವೇ ಇಲ್ಲ. ಏಕೆಂದರೆ, ಮನುಷ್ಯನು ನಿಷ್ಕಾಮಕರ್ಮಗಳನ್ನು ಮಾಡಲಿಕ್ಕೆ ಏಕೆ ಪ್ರವೃತ್ತನಾಗಬೇಕು ? ಸಕಾಮವಾದ ಕರ್ಮಗಳನ್ನು ಆತನು ಏಕೆ ಮಾಡಬಾರದು ಎಂಬುದಕ್ಕೆ ಏನೂ ಉತ್ತರವನ್ನು ಅವರು ಕೊಡುವುದು ಶಕ್ಯವಿಲ್ಲ. ಇಷ್ಟೇ ಅಲ್ಲ, ಪರಮಾತ್ಮನಲ್ಲಿ ಭಕ್ತಿಯಿಲ್ಲದವನ ಕಡೆಯಿಂದ ಯಾವಾಗಲೂ ಸಕಾಮವಾದ ಕಾರ್ಯಗಳಾಗುವ ಸಂಭವವೇ ಹೆಚ್ಚು. ಏಕೆಂದರೆ, ಕರ್ಮಮಾಡುವುದಕ್ಕೆ ಯಾವುದೊಂದು ಪ್ರಯೋಜನವು ಬೇಕಷ್ಟೆ. ಅಂಥ ಪ್ರಯೋಜನಗಳು ಮುಖ್ಯವಾಗಿ ಎರಡು ಇರುತ್ತವೆ.

ಒಂದು ವಿಷಯೋಪಭೋಗದ ಇಚ್ಛೆ ; ಎರಡನೆಯದು ಪರಮಾತ್ಮ ಪ್ರಾಪ್ತಿಯ ಇಚ್ಛೆ. ವಿಷಯೋಪಭೋಗದ ಇಚ್ಛೆಯಿಂದ ಮಾಡಲ್ಪಡುವ ಕರ್ಮಕ್ಕೆ ಸಕಾಮ ಕರ್ಮವೆಂದು ಹೆಸರು. ಪರಮಾತ್ಮಪ್ರಾಪ್ತಿಯ ಇಚ್ಛೆಯಿಂದ ಮಾಡಲ್ಪಡುವ ಕರ್ಮಕ್ಕೆ ನಿಷ್ಕಾಮಕರ್ಮ ಅಥವಾ ನಿವೃತ್ತಕರ್ಮವೆಂದು ಹೆಸರು. ಆದಕಾರಣ ಮನುಷ್ಯನು ವಿಷಯಗಳ ನ್ನಾದರೂ ತನ್ನ ಧ್ಯೇಯವನ್ನಾಗಿ ಇಟ್ಟುಕೊಳ್ಳಬೇಕಾಗುತ್ತದೆ, ಅಥವಾ ಪರಮಾತ್ಮನನ್ನಾದರೂ ತನ್ನ ಧ್ಯೇಯವನ್ನಾಗಿ ಇಟ್ಟುಕೊಳ್ಳಬೇಕಾಗು ತ್ತದೆ. ಮೋಕ್ಷಕ್ಕೆ ಸಾಧನವಾಗುವ ಸ್ವವಿಹಿತವೃತ್ತಿಯಲ್ಲಿ ಸಕಾಮ ಕರ್ಮಕ್ಕೆ ಆಸ್ಪದವಿಲ್ಲವೆಂಬುದನ್ನು ಹಿಂದೆ ತೋರಿಸಿಯೇ ಇರುವೆವು. ಆದಕಾರಣ ಸ್ವವಿಹಿತವೃತ್ತಿಯೊಂದೊಡನೆ ನಿಷ್ಕಾಮಕರ್ಮವು ಬರು ತ್ತದೆ. ನಿಷ್ಕಾಮಕರ್ಮವೆಂದೊಡನೆ ಪರಮಾತ್ಮನು ಬರುತ್ತಾನೆ. ಈ ಬಗೆಯಾಗಿ ಸ್ವವಿಹಿತವೃತ್ತಿಗೂ ಪರಮಾತ್ಮನಿಗೂ ನಿಕಟವಾದ ಸಂಬಂಧ ವಿರುತ್ತದೆ. ಆದಕಾರಣ, ಪರಮಾತ್ಮನಲ್ಲಿ ಭಕ್ತಿಯಿಲ್ಲದವನ ಕಡೆಯಿಂದ, ಸ್ವವಿಹಿತವೃತ್ತಿಯು ಎಂದಿಗೂ ಸರಿಯಾಗಿ ಆಗದು. ಕರ್ತವ್ಯಕರ್ಮ ವನ್ನು ಮಾಡಿದರಾಯಿತು ಎಂದೆನ್ನುವಾಗ ಆ ಕರ್ತವ್ಯಕರ್ಮದಲ್ಲಿ ಭಕ್ತಿ ಯನ್ನು ಮಾಡುವದೂ ಒಂದು ಕರ್ತವ್ಯಕರ್ಮವೇ ಎಂದು ಇಟ್ಟು ಕೊಂಡರೆ ಆ ಮಾತು ಬೇರೆ. ಹಾಗೆ ಮಾಡದೆ, ಭಕ್ತಿವಿರಹಿತವಾದ ಸ್ವಕರ್ತವ್ಯವನ್ನು ಮಾಡುವುದರಿಂದ ಇಷ್ಟಾರ್ಥಸಿದ್ಧಿಯಾಗದು.

ಇದಲ್ಲದೆ, ಸರ್ವವೂ ಭಗವದಧೀನವೆಂಬ ಜ್ಞಾನವೂ ಪರಮ ಧರ್ಮಕ್ಕೆ ಅವಶ್ಯವೆಂಬುದನ್ನು ಹಿಂದೆ ಸಿದ್ಧಮಾಡಿರುವೆವಷ್ಟೆ. ಸರ್ವವೂ ಭಗವದಧೀನವೆಂಬ ಸಿದ್ಧಾಂತದಲ್ಲಿ, ಮುಕ್ತಿಯೂ ಭಗವದಧೀನವಿರುತ್ತ ದೆಂಬುದೂ ಅಡಕವಾಗಿರುತ್ತದೆ. ಹೀಗೆ ಮುಕ್ತಿಯು ಪರಮಾತ್ಮನ ಅಧೀನವಾದ ವಸ್ತುವಾದ ಬಳಿಕ, ಆತನಲ್ಲಿ ಭಕ್ತಿಬೇಡವೆ ? ಆದಕಾರಣ, ನಿಜವಾದ ಜ್ಞಾನವಿದ್ದಲ್ಲಿ ನಿಜವಾದ ಭಕ್ತಿಯು ಇದ್ದೇ ಇರುತ್ತದೆ. ಭಕ್ತಿಯು ಯಂತ್ರಕ್ಕೆ ಉಗಿಯಿದ್ದಂತೆ.ಅದು ಅದೃಶ್ಯ ಪದಾರ್ಥವಾದರೂ ಯಂತ್ರಗಳಿಗೆಲ್ಲ ಚಲನಶಕ್ತಿಯನ್ನು ಕೊಡುತ್ತದೆ.

ಗೀತೆಯಲ್ಲಿ ಅನೇಕ ಶ್ಲೋಕಗಳಲ್ಲಿ ಈ ಭಕ್ತಿಯ ಮಾಹಾತ್ಮ್ಯವು

ಬಂದಿದೆ. ಆದರಿಂದ ಭಕ್ತಿಯೂ ಪರಮಧರ್ಮವೆಂಬುದು ಗೊತ್ತಾಗು ತ್ತದೆ. ಯುದ್ಧವನ್ನಾಡೆಂದು ಹೇಳುವುದಷ್ಟೇ ಕೃಷ್ಣನ ಉದ್ದೇಶವಲ್ಲ. ಭಕ್ತ್ಯಾದಿಗಳೂ ಧರ್ಮಗಳು. ಯುದ್ಧವು ಧರ್ಮದ ಏಕದೇಶವು. ಭಕ್ತ್ಯಾದಿಗಳಿಂದ ಅದು ಕೂಡಿರದಿದ್ದರೆ ಅದು ಪರಮಧರ್ಮವಾಗಲಾ ರದು. ಆದಕಾರಣ ಭಕ್ತಿವೈರಾಗ್ಯಾದಿಗಳೂ ಬೇಕೇಬೇಕು. ಪರಮಾತ್ಮನ ದ್ವೇಷಿಗಳ ಮತ್ತು ತದನುಬಂಧಿಗಳ ನಿಗ್ರಹವು ಪರಮಧರ್ಮವಾಗಿ ದ್ದರೂ, ಬಾಂಧವರು ಗುರುಗಳು ಮುಂತಾದವರ ವಧೆಮಾಡುವುದು ಅನ್ಯಾಯವಾದುದೆಂಬ ಶಂಕೆಯು ಅರ್ಜುನನ ಮನದಲ್ಲಿ ಬರಲಿಕ್ಕೆ ಆತ ನಲ್ಲಿ ಭಕ್ತಿಯು ಸಡಿಲಾದುದೇ ಕಾರಣ. ಆತನಲ್ಲಿ ಭಕ್ತಿದಾರ್ಢ್ಯದ ಅಭಾವ ಇದ್ದ ಮೂಲಕವೇ ಆತನ ಮನಸ್ಸಿನಲ್ಲಿ ಶಂಕೆ. ಆದಕಾರಣ, ಶ್ರೀಕೃಷ್ಣನು ಆ ಭಕ್ತಿಮುಂತಾದವುಗಳನ್ನು ದೃಢಪಡಿಸುವ ಉದ್ದೇಶದಿಂದ ಅವನ್ನೂ ಹೇಳಿದ್ದಾನೆ. ಹಾಗಿಲ್ಲದಿದ್ದರೆ ಗೀತೆಯಲ್ಲಿ ಭಕ್ತಿವೈರಾಗ್ಯಾದಿಗಳು ಸೇರಲು ಕಾರಣವೇ ಇದ್ದಿಲ್ಲ. ಸಾರಾಂಶ, ಶ್ರೀಕೃಷ್ಣನು ಗೀತೆಯಲ್ಲಿ ಯುದ್ಧಾದಿರೂಪಧರ್ಮವನ್ನೂ ಭಕ್ತಿವೈರಾಗ್ಯಾದಿ ರೂಪಧರ್ಮವನ್ನೂ ನಿರೂಪಿಸಿರುವನು. ಇದಾಯಿತು, ಭಕ್ತಿವೈರಾಗ್ಯಾದಿಗಳ ವಿಷಯ. ಇನ್ನು, ಭಗವಂತನ ಮಹಿಮಾದಿಗಳನ್ನು ವರ್ಣಿಸುವ ಉದ್ದೇಶವು ಭಕ್ತಿ ಯನ್ನು ಹುಟ್ಟಿಸುವುದು. ಆದಕಾರಣ, ಸ್ವವಿಹಿತವೃತ್ತಿಯನ್ನು ಮಾಡು ವುದನ್ನು ಬಿಟ್ಟು ಕೇವಲ ಭಕ್ತ್ಯಾದಿಗಳನ್ನು ಮಾಡಿದರೂ ಪರಮಧರ್ಮ ನಿವೃತ್ತಿಯಾಯಿತು. ಹಾಗೆಯೇ ಸ್ವವಿಹಿತವೃತ್ತಿಯನ್ನುಮಾಡಿ ಭಕ್ತ್ಯಾದಿ ಗಳನ್ನು ಮಾಡಿದರೂ ಪರಮಧರ್ಮನಿವೃತ್ತಿಯಾಯಿತು.

ಗೀತೆಯ, ಕೆಳಗೆ ಕಾಣಿಸಿದ ಶ್ಲೋಕಗಳಿಂದ ಭಕ್ತಿಯು ಪರಮ ಧರ್ಮದ ಅಂಗವೆಂಬುದು ಸಿದ್ಧವಾಗುತ್ತದೆ.†

೧೮.೪೬ರಲ್ಲಿ ಯಾವನಿಂದ ಪ್ರಾಣಿಗಳ ಉತ್ಪತ್ತಿಯೋ, ಯಾವ ನಿಂದ ಇದೆಲ್ಲವೂ ವ್ಯಾಪ್ತವಾಗಿರುವುದೋ ಆತನನ್ನು ಸ್ವಕರ್ಮದಿಂದ ಚೆನ್ನಾಗಿ ಪೂಜಿಸಿದರೆ, ಮಾನವರಿಗೆ ಸಿದ್ಧಿಯು ದೊರೆಯುತ್ತದೆಂದು

† ಭಕ್ತಿಯು ಪರಮಧರ್ಮವೆಂಬುದಕ್ಕೆ ಆಧಾರಗಳು:— ೧೮.೪೬; ೧೮.೬೪; ೧೮.೬೫; ೧೮.೬೬; ೧೧.೫೩; ೧೧.೫೪; ೧೨.೨; ೧೨.೨೦.

ಹೇಳಿರುವುದು. ಇದರಿಂದ, ಭಕ್ತಿಯಿಂದ ಅರ್ಚನೆ ಮಾಡುವುದೂ ಭಗವದಾರಾಧನೆಯು ಒಂದು ರೀತಿಯು ಎಂಬುದು ಗೊತ್ತಾಗುತ್ತದೆ. ೧೮.೬೪ರಲ್ಲಿ, ನಾನು ನಿನಗೆ ಗೂಢವಾದವುಗಳಲ್ಲಿ ಅತ್ಯಂತ ಗೂಢವಾದ ಜ್ಞಾನವನ್ನು ಹೇಳುತ್ತೇನೆಂದು ಹೇಳಿ, ಮುಂದೆ ೧೮.೬೫ರಲ್ಲಿ 'ಮನವನ್ನು ನನ್ನಲ್ಲಿ ನೆಲಿಸು, ನನ್ನ ಭಕ್ತನಾಗು, ನನ್ನನ್ನು ಪೂಜಿಸು' ಎಂದು ಮುಂತಾಗಿ ಹೇಳಿರುವನು. ಅದು ಸರ್ವಗುಹ್ಯತಮವಾದ ವಚನವೆಂದೂ ಹಿತಸಾಧನವಾದುದೆಂದೂ ಭಗವತ್ಪ್ರಾಪ್ತಿಸಾಧನವಾದುದೆಂದೂ ಹೇಳಿರುವುದರಿಂದಲೇ ಅದು ಅಂದರೆ ಭಕ್ತಿಯು ವಿಹಿತಕರ್ತವ್ಯವೆಂಬುದು ಗೊತ್ತಾಗುತ್ತದೆ. ಅದೇ ಮೇರೆಗೆ ೧೮.೬೬ರಲ್ಲಿ ಸರ್ವಧರ್ಮಗಳನ್ನೂ ಬಿಟ್ಟು, ನನ್ನೊಬ್ಬನಿಗೇ ಶರಣು ಬಾ." ಎಂದು ಅಲ್ಲಿ ಸ್ಪಷ್ಟವಾಗಿ ಹೇಳಿದೆ. ಅಲ್ಲಿ ಶರಣಾಗತಿತ್ವವು ಹೇಳಲ್ಪಟ್ಟಿರುವುದು. ಶರಣಾಗತಿತ್ವವೆಂದರೇನು ? ಸ್ವವಿಹಿತವೃತ್ತಿಯಿಂದಲೂ ಭಕ್ತಿಯಿಂದಲೂ ಭಗವದರಾಧನೆ ಮಾಡುವುದೆಂದರೇನೇ ಶರಣಾಗತಿತ್ವವು. ಏಕೆಂದರೆ ಪರಮಾತ್ಮನಿಗೆ ಅನನ್ಯಭಾವದಿಂದ ಶರಣುಹೋದರೆ ಮಾತ್ರ ಶರಣಾಗತಿಯಾಗಲಿಲ್ಲ. ಶರಣಾಗತಿಯುಲ್ಲಿ ಮೂರು ತತ್ವಗಳು ಅಡಕವಾಗಿರುತ್ತವೆ. (೧) ಆತನು ಸರ್ವೋತ್ತಮನೆಂಬ ಜ್ಞಾನವಿರಬೇಕು. (೨) ಆತನಲ್ಲಿ ಅತ್ಯಧಿಕವಾದ ಪ್ರೇಮವಿರಬೇಕು. (೩) ಮತ್ತು ಸರ್ವಕರ್ಮಗಳ ಸಮರ್ಪಣೆ ಮಾಡಬೇಕು. ಶರಣವ್ರಜನವೆಂದರೇನೇ ಸ್ವವಿಹಿತವೃತ್ತಿಯಿಂದಲೂ ಭಕ್ತಿಯಿಂದಲೂ ಭಗವದಾರಾಧನೆ ಮಾಡುವುದು.

ಭಕ್ತಿಯು ಪರಮಧರ್ಮವೆಂಬುದು ಗೀತೆಗೆ ಅಭಿಮತವಾಗಿಲ್ಲವೆಂದು ಕೆಲವರ ಆಕ್ಷೇಪ. ಅದಕ್ಕೆ ಅವರು ಕೊಡುವ ಕಾರಣವೇನೆಂದರೆ ಶ್ರವಣಾದಿರೂಪ ಸ್ವವಿಹಿತವೃತ್ತಿಯಿಂದಲೇ ಪರೋಕ್ಷ ಮತ್ತು ಅಪರೋಕ್ಷಜ್ಞಾನಗಳು ಸಿದ್ಧವಾಗುತ್ತವೆ; ಆದಕಾರಣ, ಆ ಶ್ರವಣಾದಿಗಳೇ ಪರಮಧರ್ಮಗಳು, ಅವುಗಳಿಗೆ ಭಕ್ತಿಯು ಆವಶಕ್ಯತೆಯಿಲ್ಲವೆಂದು ಈ ಆಕ್ಷೇಪಕಾರರ ಅಂಬೋಣ. ಇದಕ್ಕೆ ನಮ್ಮ ಉತ್ತರವೇನೆಂದರೆ ಪರೋಕ್ಷ ಮತ್ತು ಅಪರೋಕ್ಷ ಜ್ಞಾನಗಳಿಗೂ ಕೂಡ ಭಕ್ತಿಯು ಆವಶ್ಯಕತೆಯು ಇದ್ದೇ ಇರುತ್ತದೆ; ಈ ಬಗ್ಗೆ ಗೀತೆಯಲ್ಲಿ ಆಧಾರಗಳಿರುವವು.

೧೧.೫೩ ರಲ್ಲಿ ಭಕ್ತಿಯಿಲ್ಲದೆ, ಕೇವಲ ವೇದಾರ್ಥಶ್ರವಣದಿಂದ ವಿಶ್ವರೂಪ ದರ್ಶನವಾಗುವುದು ಶಕ್ಯವಿಲ್ಲವೆಂದೂ ೧೧.೫೪ ರಲ್ಲಿ ಕೇವಲ ಅನನ್ಯವಾದ ಭಕ್ತಿಯಿಂದ ಮಾತ್ರವೇ ಅದು ಸಾಧ್ಯವಿದೆಯೆಂದೂ ಹೇಳಿದೆ. ಸಾರಾಂಶ, ಪರೋಕ್ಷ ಮತ್ತು ಅಪರೋಕ್ಷ ಜ್ಞಾನಗಳು ಕೂಡ ಭಕ್ತಿಯ ಅಧೀನ ವಾಗಿವೆ. ಆದಕಾರಣ, ಭಕ್ತಿಯೇ ಉತ್ತಮಸಾಧನವೆಂಬುದು ಸಿದ್ಧವಾಯಿತು. ಭಕ್ತಿಯ ಅಭಾವವಿದ್ದಲ್ಲಿ ಪರಮಾತ್ಮನ ಜ್ಞಾನದ ಅಭಾವಿರುತ್ತದೆಂದೂ ಭಕ್ತಿಯಿದ್ದಲ್ಲಿ ಅದು ಇರುತ್ತದೆಂದೂ ವ್ಯತಿರೇಕದಿಂದಲೂ ಅನ್ವಯದಿಂದಲೂ ಇಲ್ಲಿ ಹೇಳಿದೆ. ಸಾರಾಂಶ, ಶ್ರವಣಾದಿಗಳು ಜ್ಞಾನಾದಿಗಳಿಗೆ ಸಾಧನಗಳಾಗಿದ್ದರೂ ಭಕ್ತಿಯೇ ಆ ಶ್ರವಣಾದಿ ಸರ್ವಸಾಧನಗಳಿಗಿಂತಲೂ ಉತ್ತಮವಾದ ಸಾಧನವೆಂದು ಹೇಳುವುದೇ ನಮ್ಮ ಮುಖ್ಯ ಉದ್ದೇಶ. ಭಕ್ತಿರಹಿತ ಶ್ರವಣಾದಿಗಳು ಜ್ಞಾನಾದಿಗಳಿಗೆ ಸಾಧನಗಳಾಗಿದ್ದರೂ ಅಂಗಾಂಗಿಭಾವದಿಂದ ಭಕ್ತಿಸಾಧನವು ಉತ್ತಮವೆಂದು ಹೇಳಿರುವುದರಿಂದ, ಭಕ್ತಿಯು ಪರಮ ಸಾಧನವೆಂಬ ಸಿದ್ಧಾಂತಕ್ಕೆ ಬಾಧೆ ಬರುವುದಿಲ್ಲವೆಂಬುದು ನಮ್ಮ ತಾತ್ಪರ್ಯ.

೧೮-೬೬ ನೆಯ ಶ್ಲೋಕದಲ್ಲಿ ಸರ್ವಧರ್ಮಗಳನ್ನು ಬಿಡುವುದೇ ಕರ್ತವ್ಯವೆಂದು ಹೇಳಿದೆಯೆಂದು ಕೆಲವರು ವಾದಿಸುತ್ತಾರೆ. ಅದು ಸರಿಯಲ್ಲ. ಸರ್ವಧರ್ಮಗಳನ್ನು ಬಿಡುವುದೆಂದರೆ ಸರ್ವವಿರುದ್ಧ ಧರ್ಮಗಳನ್ನು ಬಿಡುವುದು ಎಂದು ಅರ್ಥ. ಮೋಕ್ಷಕ್ಕೆ ಅನುಕೂಲವಾದ ಧರ್ಮಗಳನ್ನು ಬಿಡಹೇಳುವುದು ಗೀತೆಯ ಉದ್ದೇಶವಲ್ಲ, ಹಾಗೆ ಬಿಡ ಹೇಳಲು ಕಾರಣವೂ ಇಲ್ಲ. ಈ ಮಾತು ೧೧.೫೪ ಮತ್ತು ೧೧.೫೫ ನೆಯ ಶ್ಲೋಕಗಳಿಂದ ಸ್ಪಷ್ಟವಾಗುತ್ತದೆ. ಏಕೆಂದರೆ, ಈ ಶ್ಲೋಕಗಳಲ್ಲಿ ಪರಮಾತ್ಮ ವಿಷಯಕವಾದ ಕರ್ಮಗಳನ್ನು ಭಕ್ತನೂ ಮಾಡಲೇಬೇಕೆಂತಲೂ ಕೇವಲ ಅನನ್ಯವಾದ ಭಕ್ತಿಯಿಂದ ಮಾತ್ರವೇ ಆತನನ್ನು ಪ್ರಾಪ್ತಮಾಡಿಕೊಳ್ಳುವುದು ಶಕ್ಯವಿದೆಯೆಂತಲೂ ಸ್ಪಷ್ಟವಾಗಿ ಹೇಳಿದೆ. ಅಂದರೆ ಭಗವತ್ಪ್ರಾಪ್ತಿಗೆ ಸಾಧಕವಾದುದೇ ಕರ್ತವ್ಯಕರ್ಮ, ಅದಕ್ಕೆ ವಿರುದ್ಧವಾದುದೇ ತ್ಯಾಜ್ಯ ಅಥವಾ ನಿಷಿದ್ಧಕರ್ಮ. ಸಾರಾಂಶ, ಭಗವತ್ಕರ್ಮವೆಂದರೆ (೧) ಸ್ವವಿಹಿತವಾದುದು, ಮತ್ತು (೨) ಪರಮಾತ್ಮ ವಿಷಯಕವಾದುದು

ಎಂದು ಅರ್ಥ. ೧೨ ನೆಯ ಅಧ್ಯಾಯದಲ್ಲಿ ಸರ್ವಸಾಧನಗಳಲ್ಲಿ ಭಗವದ್ಭಕ್ತಿಯೆಂಬ ಸಾಧನವೇ ಶ್ರೇಷ್ಠವಾದುದೆಂದು ನಿರ್ಣಯಿಸಲ್ಪಟ್ಟಿದೆ. ಭಕ್ತನಲ್ಲಿರತಕ್ಕ ಅನೇಕ ಗುಣಗಳ ವರ್ಣನೆಯೂ ಅಲ್ಲಿ ಮಾಡಲ್ಪಟ್ಟಿದ್ದು, ಕೊನೆಯ ಶ್ಲೋಕದಲ್ಲಿ ಧರ್ಮ್ಯವೂ ಅಮೃತವೂ ಆದ ನನ್ನೀವಚನವನ್ನು ಪಾಲಿಸುವ ಮತ್ತು ನಾನೇ ಸರ್ವೋತ್ತಮನೆಂದು ಬಗೆಯುವ ಶ್ರದ್ಧಾಳುಗಳಾದ ಭಕ್ತರು ನನಗೆ ಅತ್ಯಂತ ಪ್ರಿಯರು'' ಎಂಬುದಾಗಿ ಸ್ಪಷ್ಟವಾಗಿ ಹೇಳಿದೆ. ೧೪.೨೬ ರಲ್ಲಿ ಯಾವನು ಏಕ್ಕಕಡೆಗೆ ಹರಿಯುದ ಭಕ್ತಿಯಿಂದ ನನ್ನನ್ನು ಸೇವಿಸುತ್ತಾನೋ ಆತನೇ ಗುಣಾತೀತನು ಎಂದು ಹೇಳಿದೆ. ಕೊನೆಗೆ ೧೮.೬೮ ರಲ್ಲಿ ಯಾವನು ಈ ಪರಮಗುಹ್ಯವನ್ನು ನನ್ನ ಭಕ್ತರಿಗೆ ತಿಳಿಸುವನೋ ಆತನು ನನ್ನಲ್ಲಿ ಉತ್ಕೃಷ್ಟವಾದ ಭಕ್ತಿಯನ್ನು ಪಡೆದು ನನ್ನ ಕಡೆಗೇ ಬರುತ್ತಾನೆಂಬುದಕ್ಕೆ ಸಂದೇಹವಿಲ್ಲವೆಂದು ಹೇಳಿದೆ. ೭.೧೪ ರಲ್ಲಿ ಗುಣಮಯವಾದ ಆತನ ಮಾಯೆಯನ್ನು ದಾಟುವುದು ಬಹಳ ಕಠಿನವೆಂದೂ ಆತನನ್ನು ಮೊರೆಹೊಕ್ಕವರು ಮಾತ್ರವೇ ಅದನ್ನು ದಾಟಬಲ್ಲರೆಂದೂ ಹೇಳಿದೆ. ೧೩.೧೦ ರಲ್ಲಿ, ಅನನ್ಯಯೋಗದಿಂದ ಆತನಲ್ಲಿ ಅವ್ಯಭಿಚಾರಿಯಾದ ಭಕ್ತಿಯು ಎಂದರೆ ಏಕ್ಕಕಡೆಗೆ ಹರಿಯುದಿರುವಂಥ ಭಕ್ತಿಯು ಜ್ಞಾನಸಾಧನಗಳಲ್ಲೊಂದು ಎಂದು ಹೇಳಿದೆ. ೧೩.೧೮ ರಲ್ಲಿ ಜ್ಞಾನಸಾಧನಾದಿಗಳನ್ನು ತಿಳಿದುಕೊಂಡ ಭಕ್ತನು ಆತನಲ್ಲಿ ಇರುವುದಕ್ಕೆ ಅರ್ಹನಾಗುತ್ತಾನೆಂದು ಹೇಳಿದೆ. ೧೫.೪ ರಲ್ಲಿ ಸಂಸಾರವೃಕ್ಷವನ್ನು ವೈರಾಗ್ಯದಿಂದ ಸಹಿತವಾದ ಜ್ಞಾನವೆಂಬ ತೀಕ್ಷ್ಣವಾದ ಶಸ್ತ್ರದಿಂದ ಕಡಿದು ಹಾಕಿ, ಆ ಬಳಿಕ ಆ ಸಂಸಾರವೃಕ್ಷಕ್ಕೆ ಪ್ರವರ್ತಕನಾದ ಆ ಆದ್ಯ ಪುರುಷನಿಗೇ ಶರಣು ಹೋಗಬೇಕೆಂದು ಹೇಳಿದೆ.

ಈ ಬಗೆಯಾಗಿ ಗೀತೆಯ ಶ್ಲೋಕಗಳಿಂದ, ಸ್ವವಿಹಿತವೃತ್ತಿಯು ಹೇಗೆ ಆವಶ್ಯಕ ಅಂಗವೋ ಹಾಗೆ ಭಕ್ತಿಯೂ ಪರಮಧರ್ಮಕ್ಕೆ ಆವಶ್ಯಕವಾದ ಅಂಗವೆಂದು ಸಿದ್ಧವಾಗುತ್ತದೆ.

---

## ೧೩ನೆಯ ಪ್ರಕರಣ

# ಭಗವದಾರಾಧನೆ

**ಇದು ಭಾಗ್ಯ ಇದು ಭಾಗ್ಯ ಇದು ಭಾಗ್ಯವಯ್ಯಾ ।**
**ಪದುಮನಾಭನ ಪಾದಭಜನೆ ಸುಖವಯ್ಯಾ ॥ ೧ ॥**

**—ಪುರಂದರದಾಸ**

**ಸರ್ವ ಕೆಲಸಗಳೆಲ್ಲ ಪೂಜೆಯು ॥ ೨ ॥**

**ಹರಿಕಥಾಮೃತಸಾರ**

ಇಲ್ಲಿಯವರೆಗೆ ನಾವು ಪರಮಧರ್ಮಕ್ಕೆ ಅವಶ್ಯವಾಗಿರುವ, ಜ್ಞಾನ, ಕರ್ಮ ಮತ್ತು ಭಕ್ತಿ ಇವುಗಳನ್ನು ಕುರಿತು ವಿವೇಚಿಸಿದೆವು. ಇನ್ನು, ಈ ಪ್ರಕರಣದಲ್ಲಿ ಈ ಜ್ಞಾನ, ಕರ್ಮ ಮತ್ತು ಭಕ್ತಿ ಇವುಗಳ ಮುಖ್ಯ ಧ್ಯೇಯವಾದ ಭಗವದಾರಾಧನೆಯನ್ನು ಕುರಿತು ವಿವೇಚಿಸಿ ನಮ್ಮ ವಿವರಣವನ್ನು ಪೂರ್ಣಗೊಳಿಸುವೆವು.

ಜ್ಞಾನ, ಕರ್ಮ ಮತ್ತು ಭಕ್ತಿ ಇವುಗಳ ಮುಖ್ಯ ಧ್ಯೇಯವು ಭಗವದಾರಾಧನೆಯಾಗಿರಬೇಕು; ಅಂದರೆ ಮಾತ್ರವೇ ಅವೆಲ್ಲವುಗಳಿಗೆ ಪರಮಧರ್ಮದ ಸ್ವರೂಪವು ಉಂಟಾಗುತ್ತದೆ. ವಸ್ತುತಃ ಮುಖ್ಯ ಪರಮಧರ್ಮವೆಂದರೆ ಈ ಭಗವದಾರಾಧನೆಯೇ. ಮಿಕ್ಕವುಗಳೆಲ್ಲ ಆ ಭಗವದಾರಾಧನೆಗೆ ಸಹಾಯಕವಾದವುಗಳು. ಮನುಷ್ಯನು ಜ್ಞಾನವನ್ನೇ ಗಳಿಸಲಿ, ಸ್ವವಿಹಿತವೃತ್ತಿಯನ್ನೇ ಆಚರಿಸಲಿ, ಅಥವಾ ಭಕ್ತಿಯನ್ನೇ ಮಾಡಲಿ, ಅವೆಲ್ಲವುಗಳ ಮುಖ್ಯ ಉದ್ದೇಶವು ಪರಮಾತ್ಮಸೇವೆಯನ್ನು ಮಾಡುವದಾಗಿರಬೇಕು. ಈ ಧ್ಯೇಯವನ್ನು ಇಟ್ಟುಕೊಳ್ಳದಿದ್ದರೆ ಜ್ಞಾನವೂ ವ್ಯರ್ಥ, ಕರ್ಮವೂ ವ್ಯರ್ಥ, ಭಕ್ತಿಯೂ ವ್ಯರ್ಥ. ಪರಮಾತ್ಮನ ಸೇವಕನಾಗುವದೇ ಮನುಷ್ಯನ ಮುಖ್ಯ ಧ್ಯೇಯ. ಭಗವತ್ಕಾರ್ಯಗಳನ್ನು ಸಾಧಿಸುವದೇ ಆತನ ಜೀವಿತದ ಮುಖ್ಯ ಉದ್ದೇಶ. ಭಗವಂತನ ಮುಖ್ಯ ಕಾರ್ಯಗಳೆಂದರೆ ಶಿಷ್ಟರಕ್ಷಣ ದುಷ್ಟಶಿಕ್ಷಣ. ಮನುಷ್ಯನು ತನ್ನ ಜ್ಞಾನದಿಂದಲೂ ಕರ್ಮದಿಂದಲೂ ಭಕ್ತಿಯಿಂದಲೂ ಭಗ

ವಂತನ ಈ ಕಾರ್ಯಗಳಿಗೆ ಪರವಾಗಬೇಕು. ಭಗವಂತನ ಈ ಸೇವೆಯನ್ನು ಮಾಡುವುದಕ್ಕೆ ಸದಾ ತತ್ಪರನಾಗಿರಬೇಕು. ತಾನು ಯಾವ ಕಾರ್ಯವನ್ನು ಮಾಡಿದರೂ ಅದು ಭಗವಂತನ ಸೇವೆಯೆಂಬ ಭಾವನೆಯು ಮನಸ್ಸಿನಲ್ಲಿರದಿದ್ದರೆ, ಆ ಕಾರ್ಯವು ಮೋಕ್ಷಪ್ರದವಾಗಲಾರದು. ನೀನು ಮಾಡುವ ಕೆಲಸ, ಅನುಭವಿಸುವ ಭೋಗ, ಆಚರಿಸುವ ಯಜ್ಞ ನೀಡುವ ದಾನ, ಮಾಡುವ ತಪಸ್ಸು ಇವೆಲ್ಲವನ್ನೂ ನನಗೆ ಸಮರ್ಪಿಸು (೯.೨೭) ಎಂದು ಗೀತೆಯು ಹೇಳುತ್ತದೆ.

> **ಈ ಉಪಾಸನೆಗೈವರಿಳೆಯೊಳು । ದೇವತೆಗಳಲ್ಲದೆ ನರ ।**
> **ರಲ್ಲಾವ ಬಗೆಯಿಂದ ಅವರ ಅರ್ಚನೆಯು ಹರಿಪೂಜೆ ।**
> **ಕೇವಲ ಪ್ರತಿಮೆಗಳೆನಿಪರುರ । ಮಾವಿನೋದಿಗೆ, ಇವರನುಗ್ರಹ ।**
> **ದೇವರನುಗ್ರಹವೆನಿಸುವುದು, ಸನ್ಮುಕ್ತಿಯೋಗ್ಯರಿಗೆ ।**
>
> **---ಹರಿಕಥಾಮೃತಸಾರ**

ಭಗವಂತನ ಸೇವೆಯನ್ನೇ ಮುಖ್ಯ ಧ್ಯೇಯವನ್ನಾಗಿ ಇಟ್ಟುಕೊಳ್ಳದೆ, ಅನ್ಯದೇವತೆಗಳ ಆರಾಧನೆಯನ್ನು ಮುಖ್ಯಧ್ಯೇಯವನ್ನಾಗಿ ಇಟ್ಟುಕೊಂಡರೆ ಆ ಜ್ಞಾನಕರ್ಮಭಕ್ತಿಗಳು ಪರಮಧರ್ಮವಾಗಲಾರವು. ಗೀತೆಯು ಭಗವಂತನನ್ನು ಆರಾಧಿಸುವುದಕ್ಕೆ ಹೇಳುತ್ತದಲ್ಲದೆ ಅನ್ಯರನ್ನು ಆರಾಧಿಸುವುದಕ್ಕೆ ಹೇಳುವುದಿಲ್ಲ. ಈ ಕೆಳಗೆ ಕೊಟ್ಟ ಶ್ಲೋಕಗಳಲ್ಲಿ ಈ ಭಗವದಾರಾಧನೆಯ ವಿಷಯವನ್ನು ಗೀತೆಯು ವಿವೇಚಿಸಿರುತ್ತದೆ.*

೨.೧೮ ರಲ್ಲಿ ಅನಾದಿಯೂ ಅಪ್ರಮೇಯನೂ ಆದ ಪರಮಾತ್ಮನ ಸಲುವಾಗಿ ಎಂದರೆ ಪರಮಾತ್ಮನ ಪೂಜೆಯೆಂದು ಯುದ್ಧಮಾಡಬೇಕೆಂದು ಶ್ರೀಕೃಷ್ಣನು ಹೇಳಿದ್ದಾನೆ. ೨.೪೫ ರಲ್ಲಿ ನಿತ್ಯಸತ್ವಸ್ಥನಾಗ

* ಭಗವದಾರಾಧನೆಗೆ ಆಧಾರಗಳು:— ೯.೨೭, ೨.೧೮; ೨.೪೫; ೩,೯; ೪.೧೧; ೪.೨೪ ೪,೩೨; ೫.೧೦; ೭.೧೫; ೭.೨೦; ೭,೨೧; ೭.೨೨; ೭.೨೮; ೮.೫; ೮.೬; ೯.೧೨; ೯.೧೫; ೯.೧೪; ೯.೨೨; ೯,೨೩; ೯.೨೫; ೯,೨೬; ೯.೩೦; ೯.೩೨; ೯.೩೩; ೧೦.೮; ೧೦.೯; ೧೦.೧೦ ೧೨.೨; ೧೨.೬; ೧೨,೭, ೧೩.೨೫, ೧೩,೨೬, ೧೪.೨೬, ೧೫.೧೯, ೧೭.೨೪, ೧೭.೨೫, ೧೮.೬೧, ೧೮.೬೨.

ಲಿಕ್ಕೆ ಎಂದರೆ ಭಗವಂತನ ಉಪಾಸನೆಯನ್ನು ಮಾಡಲಿಕ್ಕೆ ಉಪದೇಶಿಸಿದ್ದಾನೆ. ೩.೯ ರಲ್ಲಿ, ಯಾವತ್ತು ಕರ್ಮಗಳನ್ನು ವಿಷ್ಣುವಿನ ಯಜ್ಞವೆಂದು ಎಂದರೆ ಪೂಜೆಯೆಂದು ಮಾಡುವುದಕ್ಕೆ ಹೇಳಿದೆ. ೪.೧೧ ರಲ್ಲಿ, ಮನುಷ್ಯರೆಲ್ಲರೂ ತನ್ನ ಹಾದಿಯನ್ನೇ ಹಿಡಿಯಬೇಕೆಂದೂ ೪.೨೪ ರಲ್ಲಿ ಜ್ಞಾನ ತಪಸ್ಸಿನಿಂದ ಪೂತರಾದವರು ಪರಮಾತ್ಮನ ಉಪಾಸನೆಯನ್ನೇ ಕೈಕೊಂಡು ಆತನನ್ನು ಹೊಂದುತ್ತಾರೆಂದೂ ಹೇಳಿದೆ. ೪.೩೨ ರಲ್ಲಿ, ದೈವಯಜ್ಞ, ತಪೋಯಜ್ಞ, ಇಂದ್ರಿಯನಿಗ್ರಹಯಜ್ಞ, ವಿಷಯ ಸಮರ್ಪಣಯಜ್ಞ, ದ್ರವ್ಯದಾನವೆಂಬ ಯಜ್ಞ, ಶ್ರವಣಮನನಾದಿ ರೂಪವಾದ ಯಜ್ಞ, ಪ್ರಾಣಾಯಾಮರೂಪವಾದ ಯಜ್ಞ ಇವೇ ಮುಂತಾದ ಯಾವತ್ತು ಬಗೆಯ ಯಜ್ಞಗಳ ಮುಖ್ಯ ಧ್ಯೇಯವು ಬ್ರಹ್ಮನೇ ಆಗಿರಬೇಕೆಂದು ಹೇಳಿದೆ. ಏಕೆಂದರೆ ಆ ಎಲ್ಲ ಯಜ್ಞಗಳ ಭೋಕ್ತೃವು ಅವನೇ ಇರುತ್ತಾನೆ. ೫.೧೦ ರಲ್ಲಿ ಕರ್ಮಗಳೆಲ್ಲವೂ ಬ್ರಹ್ಮನಿಗೆ ಸಮರ್ಪಿಸಲ್ಪಡಬೇಕೆಂದು ಅಂದರೆ ಆತನನ್ನೇ ಅನುಸಂಧಾನಮಾಡಿಕೊಂಡು ಯಾವತ್ತು ಕರ್ಮಗಳು ಮಾಡಲ್ಪಡಬೇಕೆಂದು ಹೇಳಿದೆ.

ಭಗವಂತನನ್ನು ಭಜಿಸದೆ, ಮಿಕ್ಕ ದೇವತೆಗಳನ್ನು ಭಜಿಸುವವರನ್ನು ಗೀತೆಯು ಅನೇಕ ಪ್ರಕಾರದಿಂದ ನಿಂದಿಸಿರುವುದು. ೭.೧೫ ರಲ್ಲಿ ದುಷ್ಕೃತಿಗಳೂ ಮೂಢರೂ ಆದ ನರಾಧಮರು ಭಗವಂತನನ್ನು ಭಜಿಸುವುದಿಲ್ಲವೆಂದೂ ೭.೨೦, ೨೧.೪೨ ರಲ್ಲಿ ಅನೇಕರು ಅನ್ಯದೇವತೆಗಳನ್ನು ಭಜಿಸುವುದರಿಂದ, ಅವರಿಗೆ ಆ ದೇವತೆಗಳಲ್ಲಿಯೇ ಭಕ್ತಿಯು ಬೆಳೆದು ಅವರು ಅನ್ಯದೇವತೆಗಳನ್ನೇ ಆರಾಧಿಸುತ್ತಾರೆಂದೂ ಅವರಿಗೆ ಆ ದೇವತೆಗಳು ಕೊಡುವ ಫಲಗಳು ಅಂತವುಳ್ಳವುಗಳೆಂದೂ ಮುಂತಾಗಿ ಹೇಳಿದೆ. ಪುಣ್ಯಕರ್ಮಗಳನ್ನು ಮಾಡಿ ಪಾಪವನ್ನು ಕಳೆದುಕೊಂಡವರು ಮಾತ್ರವೇ ಪರಮಾತ್ಮನನ್ನು ದೃಢಮನಸ್ಸಿನಿಂದ ಭಜಿಸುತ್ತಾರೆ (೭.೨೮). ಅಂತಕಾಲದಲ್ಲಿ ಆತನನ್ನು ಸ್ಮರಿಸುವವರು ಮಾತ್ರವೇ ಆತನ ಕಡೆಗೆ ಹೋಗುತ್ತಾರೆ. ನಿತ್ಯದಲ್ಲಿ ಆತನನ್ನು ಆರಾಧಿಸುವ ರೂಢಿಯಿರದಿದ್ದರೆ, ಅಂತಕಾಲದಲ್ಲಿ ಆತನ ಸ್ಮರಣೆಯೇ ಉಂಟಾಗುವುದಿಲ್ಲ. (೮.೫, ೬) ಮಹಾತ್ಮರು ಪರಮಾತ್ಮನ ದೈವೀಪ್ರಕೃತಿಯನ್ನರಿತವರಾಗಿ ಆತನನ್ನು ಆರಾಧಿ

ಸುತ್ತಾರೆ. ಭಕ್ತಿಯಿಂದ ಆತನ ಉಪಾಸನೆಯನ್ನು ಮಾಡುತ್ತಾರೆ. (೯.೧೨). ಇಂಥ ಮಹಾತ್ಮರು ಭಗವಂತನನ್ನು ಆರಾಧಿಸುವ ರೀತಿಗಳು ಅನೇಕ ಪ್ರಕಾರವಾಗಿರುತ್ತವೆ. ಕೆಲವರು ಜ್ಞಾನಯಜ್ಞದಿಂದ ಆತನನ್ನು ಪೂಜಿಸುತ್ತ ಆತನ ಉಪಾಸನೆಯನ್ನು ಮಾಡುತ್ತಾರೆ (೯.೧೫). ಇವರು ಜ್ಞಾನಯೋಗಿಗಳು. ಇವರು ಶ್ರವಣ ಮನನಾದಿಗಳಿಂದ ಜ್ಞಾನವನ್ನು ಗಳಿಸಿಕೊಳ್ಳುವುದರಲ್ಲಿ ಮಗ್ನರಾಗಿರುತ್ತಾರೆ. ಮತ್ತೆ ಕೆಲವು ಮಹಾತ್ಮರು ಭಕ್ತಿಯೋಗಿಗಳು, ಇವರು ಹಗಲೆಲ್ಲ ಆತನನ್ನು ಪಾಡುತ್ತಲೂ ಕಠಿನವಾದ ವ್ರತಗಳನ್ನು ಆಚರಿಸಿ ಆತನನ್ನು ಹೊಂದಬೇಕೆಂದು ಪ್ರಯತ್ನ ಮಾಡುತ್ತಲೂ ನಿತ್ಯದಲ್ಲಿ ಧ್ಯಾನಯೋಗಯುಕ್ತರಾಗಿ ಆರಾಧಿಸುತ್ತಾರೆ (೯.೧೪).

ತ್ರೈವಿದ್ಯರು ಭಗವಂತನ ನಿಜವಾದ ಉಪಾಸಕರಲ್ಲ. ಏಕೆಂದರೆ, ಅವರು ಕಾಮ್ಯಕರ್ಮಿಗಳು, ಸ್ವರ್ಗವನ್ನು ಮಾತ್ರ ಬೇಡಿಕೊಳ್ಳುವವರು. ಆದರೆ ಭಾಗವತರು ಹಾಗಲ್ಲ. ಅವರು ನಿಜವಾಗಿ ಭಗವದ್ಭಕ್ತರು. ಅಂಥ ಭಾಗವತರು ಪರಮಾತ್ಮನೊಬ್ಬನನ್ನೇ ಚಿಂತಿಸುತ್ತ, ಆತನ ಉಪಾಸನೆಯನ್ನೇ ಮಾಡುತ್ತಾರೆ (೯.೨೨). 'ಶ್ರದ್ಧೆಯಿಂದೊಡಗೂಡಿ, ಮಿಕ್ಕ ದೇವತೆಗಳನ್ನು ಆರಾಧಿಸುವವರೂ,ಒಂದು ದೃಷ್ಟಿಯಿಂದ ಭಗವಂತನನ್ನು ಆರಾಧಿಸಿದಂತೆಯೇ. ಏಕೆಂದರೆ ಅನ್ಯದೇವತೆಗಳಿಗೋಸ್ಕರ ಮಾಡಲ್ಪಟ್ಟ ಪೂಜೆಯೂ ಕೊನೆಗೆ ಪರಮಾತ್ಮನಿಗೇ ಮುಟ್ಟುತ್ತದೆ. ಆದರೆ ಆ ತೆರನಾಗಿ ಮಾಡುವ ಪೂಜೆಯು ವಿಧಿಪೂರ್ವಕವಾದ ಪೂಜೆಯಲ್ಲ (೯.೨೩). ಆದಕಾರಣ, ಅಂಥವರು ಪುನಃ ಭೂಮಿಗೆ ಇಳಿಯುತ್ತಾರೆ. ದೇವತೆಗಳನ್ನು ಆರಾಧಿಸುವವರು ದೇವತೆಗಳ ಕಡೆಗೆ ಹೋಗುತ್ತಾರೆ. ಪಿತೃಗಳನ್ನು ಆರಾಧಿಸುವವರು ಪಿತೃಗಳ ಕಡೆಗೆ; ಭೂತಗಳನ್ನು ಆರಾಧಿಸುವವರು ಭೂತಗಳ ಕಡೆಗೆ ಹೋಗುತ್ತಾರೆ; ಪರಮಾತ್ಮನನ್ನು ಆರಾಧಿಸುವವರು ಮಾತ್ರವೇ ಪರಮಾತ್ಮನ ಕಡೆಗೆ ಹೋಗುತ್ತಾರೆ (೯.೨೫).

ಭಗವಂತನ ಆರಾಧನೆಗೆ ಇಂಥ ವಸ್ತುಗಳೇ ಬೇಕೆಂಬ ನಿಯಮವಿಲ್ಲ, ಪತ್ರ, ಪುಷ್ಪ, ಕೊನೆಗೆ ನೀರನ್ನಾದರೂ ಆತನಿಗೆ ಭಕ್ತಿಯಿಂದ ಅರ್ಪಿಸಿದರೆ ಅದನ್ನು ಪರಮಾತ್ಮನು ಆನಂದದಿಂದ ಸ್ವೀಕರಿಸುವನು (೯.೨೬).

ಮನುಷ್ಯನು ಎಷ್ಟೇ ದುರಾಚಾರಿಯಾಗಿದ್ದರೂ ಆತನು ಅನನ್ಯಮನಸ್ಸಿನಿಂದ ಪರಮಾತ್ಮನನ್ನು ಆರಾಧಿಸಿದರೆ ಆತನು ಸಾಧುವೆನ್ನಿಸಲ್ಪಡುತ್ತಾನೆ (೯.೩೦). ಏಕೆಂದರೆ, ಆತನನ್ನು ಅನನ್ಯವಾಗಿ ಆರಾಧಿಸುವುದರಿಂದ ಆತನು ಕ್ಷಿಪ್ರದಲ್ಲಿಯೇ ಧರ್ಮಾತ್ಮನಾಗುತ್ತಾನೆ (೯.೩೧). ಪರಮಾತ್ಮನನ್ನು ಆರಾಧಿಸುವವರು ಸ್ತ್ರೀ-ವೈಶ್ಯ-ಶೂದ್ರ ಮುಂತಾದವರೂ ಪಾಪಯೋನಿಗಳಲ್ಲಿ ಹುಟ್ಟಿದವರೂ ಪರಮಗತಿಯನ್ನು ಹೊಂದುತ್ತಾರೆ (೯.೩೨). ಎಂದಬಳಿಕ, ಪುಣ್ಯವಂತರಾದ ಬ್ರಾಹ್ಮಣರೂ ಭಕ್ತರಾದ ರಾಜರ್ಷಿಗಳೂ ಪರಮಗತಿಯನ್ನು ಹೊಂದುತ್ತಾರೆಂಬುದನ್ನೇನು ಹೇಳಬೇಕು (೯.೩೩).

ಪರಮಾತ್ಮನೇ ಎಲ್ಲರ ಹುಟ್ಟಿಗೂ ಕಾರಣನು, ಆತನಿಂದಲೇ ಎಲ್ಲವೂ ನಡೆಸಲ್ಪಡುತ್ತದೆ ಎಂಬುದನ್ನರಿತು ಬುದ್ಧಿವಂತರು ಭಕ್ತಿಯಿಂದೊಡಗೂಡಿ ಆತನನ್ನು ಆರಾಧಿಸುತ್ತಾರೆ (೧೦.೮). ಮತ್ತು ಆತನಲ್ಲಿಯೇ ಚಿತ್ತವನ್ನಿಟ್ಟವರಾಗಿಯೂ, ಆತನ ವಿಷಯಕ ಕ್ರಿಯೆಗಳನ್ನೇ ಮಾಡುತ್ತಲೂ, ಒಬ್ಬರಿಗೊಬ್ಬರು ಬೋಧಿಸುತ್ತಲೂ ನಿತ್ಯದಲ್ಲಿ ಆತನ ಕೀರ್ತನೆ ಮಾಡುತ್ತ ತೃಪ್ತಿಪಡುತ್ತಿರುತ್ತಾರೆ, ಮತ್ತು ಆನಂದಗೊಳ್ಳುತ್ತಿರುತ್ತಾರೆ (೧೦.೯). ಸತತವಾಗಿ ಆತನನ್ನು ಧ್ಯಾನಮಾಡುವವರಿಗೆ ಮತ್ತು ಪ್ರೀತಿಪೂರ್ವಕವಾಗಿ ಆತನನ್ನು ಆರಾಧಿಸುವವರಿಗೆ ಆತನು ಬುದ್ಧಿಯೋಗವನ್ನು ಕೊಡುತ್ತಾನೆ. ಅದರಿಂದ ಅವರು ಆತನೆಡೆಗೆ ಹೋಗುತ್ತಾರೆ (೧೦.೧೦).

ಮಿಕ್ಕ ಎಲ್ಲರನ್ನು ಆರಾಧಿಸುವವರಿಗಿಂತ ಪರಮಾತ್ಮನನ್ನು ಆರಾಧಿಸುವವರೇ ಶ್ರೇಷ್ಠರು (೧೨.೨). ಯಾರು ಪರಮಾತ್ಮನಲ್ಲಿ ಮನಸ್ಸನ್ನಿರಿಸಿ, ಶ್ರದ್ಧೆಯಿಂದಲೂ ನಿತ್ಯದಲ್ಲಿ ಯೋಗಯುಕ್ತರಾಗಿಯೂ ಆತನನ್ನು ಆರಾಧಿಸುವರೋ ಅವರು ಯೋಗಿಗಳಲ್ಲಿ ಹೆಚ್ಚಿನವರು (೧೨.೨). ಯಾರು ಸರ್ವಕರ್ಮಗಳನ್ನು ಪರಮಾತ್ಮನಿಗೆ ಸಮರ್ಪಿಸಿ, ಆತನೇ ಸರ್ವೋತ್ತಮನೆಂಬುದನ್ನರಿತು, ಮಿಕ್ಕಕಡೆಗೆ ಮನಸ್ಸಿಡದೆ, ಕೇವಲ ಆತನನ್ನೇ ಧ್ಯಾನಿಸುತ್ತಾರೋ ಅಂಥವರನ್ನು ಆತನು ಬಹುಬೇಗನೆ ಮೃತ್ಯುಸಂಸಾರ ಸಾಗರದಿಂದ ಪಾರುಮಾಡುತ್ತಾನೆ (೧೨.೬.೭). ಪರಮಾತ್ಮನನ್ನು ಆರಾಧಿಸುವ ರೀತಿಗಳು ಅನೇಕವಾಗಿವೆ. ಆ ಪರಮಪುರುಷನನ್ನು ಹಲವರು ಧ್ಯಾನಮಾಡಿ, ಬುದ್ಧಿಯ ಸಹಾಯದಿಂದ ತಮ್ಮ ದೇಹದಲ್ಲಿ

ಕಾಣುವರು; ಕೆಲವರು ಸಾಂಖ್ಯಯೋಗದಿಂದ, ಬೇರೆ ಕೆಲವರು ಕರ್ಮಯೋಗದಿಂದ (೧೩.೨೫), ಮತ್ತೆ ಕೆಲವರು ಸ್ವತಃ ಜ್ಞಾನವನ್ನು ಗಳಿಸದೆ, ಅನ್ಯರಿಂದ ಕೇಳಿಕೊಂಡು ಆತನನ್ನು ಆರಾಧಿಸುತ್ತಾರೆ. ಹೀಗೆ ಕೇಳಿಕೊಂಡು ಆರಾಧಿಸುವವರೂ ಕೂಡ, ಮೃತ್ಯುವನ್ನು ದಾಟುತ್ತಾರೆ (೧೩. ೨೬). ಆದರೆ, ಅವರ ಭಕ್ತಿಯು ಅವ್ಯಭಿಚಾರಿಯಾದ ಭಕ್ತಿಯಾಗಿರಬೇಕು (೧೪. ೨೬). ಈ ತರಹದ ಅವ್ಯಭಿಚಾರಿಯಾದ ಭಕ್ತಿಯು ಹುಟ್ಟಬೇಕಾದರೆ, ಅವರು ಮೂಢರಾಗದೆ, ಆತನು ಪುರುಷೋತ್ತಮನು ನೆಂಬುದನ್ನು ಅರಿತಿರಬೇಕು. ಅಂಥವರೇ ಸರ್ವವನ್ನೂ ಬಲ್ಲವರು. ಅಂಥವರು ಸರ್ವವಿಧದಿಂದಲೂ ಪರಮಾತ್ಮನನ್ನು ಆರಾಧಿಸುತ್ತಾರೆ (೧೫. ೧೯).

ಪರಮಾತ್ಮನನ್ನು ಆರಾಧಿಸುವ ವಿಧಿಯು ಯಾವುದೆಂದರೆ ಬ್ರಹ್ಮಜ್ಞಾನಿಗಳು ವಿಧಾನಪೂರ್ವಕವಾಗಿ ಮಾಡುವ ಯಜ್ಞ—ದಾನ—ತಪ ಮುಂತಾದ ಕ್ರಿಯೆಗಳು ಯಾವಾಗಲೂ 'ಓಂ' ಎಂಬ ಉಚ್ಚಾರಪೂರ್ವಕವಾಗಿಯೇ ಪ್ರಾರಂಭಿಸಲ್ಪಡಬೇಕು (೧೭. ೨೪). ಆ ಕ್ರಿಯೆಗಳಿಗೆಲ್ಲಕ್ಕೂ ಬ್ರಹ್ಮನೇ ಗುರಿಯು (೧೭. ೨೫). ಆತನನ್ನು ಅನುಸಂಧಾನ ಮಾಡಿಕೊಂಡೇ ಯಾವತ್ತು ಕ್ರಿಯೆಗಳು ಮಾಡಲ್ಪಡಬೇಕು. ಆತನೇ ಯಾವತ್ತು ಕ್ರಿಯೆಗಳಿಗೆ ಮುಖ್ಯ ಧ್ಯೇಯನು. ಈ ಬಗೆಯಾಗಿ, ಗೀತೆಯಲ್ಲಿ ಪರಮಾತ್ಮನ ಆರಾಧನೆಯು ಮಹತ್ವವು ನಾನಾವಿಧವಾಗಿ ವರ್ಣಿಸಲ್ಪಟ್ಟಿದ್ದು, ಕೊನೆಗೆ ಈಶ್ವರನು ಸರ್ವಪ್ರಾಣಿಗಳ ಹೃದಯಗುಹೆಯಲ್ಲಿ ನೆಲಸಿರುವನು; ಆತನು ದೇಹವೆಂಬ ಯಂತ್ರದಲ್ಲಿ ಆರೂಢರಾದ ಸರ್ವಪ್ರಾಣಿಗಳನ್ನೂ ತನ್ನ ಇಚ್ಛೆಯಿಂದ ತಿರುಗಿಸುತ್ತಿರುವನು (೧೮. ೬೧); ಆದಕಾರಣ ಎಲ್ಲಬಗೆಯಿಂದಲೂ ಆತನನ್ನೇ ಮೊರೆಹೊಗಬೇಕು; ಆತನ ಪ್ರಸಾದದಿಂದ ಉತ್ಕೃಷ್ಟವಾದ ಶಾಂತಿಯನ್ನೂ ಶಾಶ್ವತವಾದ ಸ್ಥಾನವನ್ನೂ ಹೊಂದಬೇಕು (೧೮. ೬೨)—ಎಂಬುದಾಗಿ ಭಗವದಾರಾಧನೆಯೇ ಮನುಷ್ಯನ ಎಲ್ಲಕ್ಕೂ ಹೆಚ್ಚಿನ ಕರ್ತವ್ಯವೆಂಬುದನ್ನು ಪುನಃ ಹೇಳಿ ಶ್ರೀಕೃಷ್ಣನು ಗೀತೋಪದೇಶವನ್ನು ಮುಗಿಸಿರುವನು.

ಮೇಲ್ಕಾಣಿಸಿದ ವಿವೇಚನೆಯ ಮೇಲಿಂದ, ಭಗವದಾರಾಧನೆಗೆ

ಗೀತೆಯು ಎಷ್ಟು ಮಹತ್ವವನ್ನು ಕೊಡುತ್ತದೆಂಬುದು ವಾಚಕರ ಲಕ್ಷ್ಯದಲ್ಲಿ ಬಂದಿರಲಿಕ್ಕೆ ಸಾಕು. ಸ್ವಲ್ಪದರಲ್ಲಿ ಹೇಳುವದೆಂದರೆ ಭಗವದಾರಾಧನೆಯೇ ಪರಮಧರ್ಮ.

ಸಕಲವೆಲ್ಲವು ಹರಿಸೇವೆಯೆನ್ನಿ ।
ರುಕುಮಣಿಯರಸ ವಿಠ್ಠಲನಲ್ಲದಿಲ್ಲವೆನ್ನಿ ॥
ನುಡಿವುದೆಲ್ಲವು ನಾರಾಯಣನ ಕೀರ್ತನವೆನ್ನಿ ।

---

## ೧೪ನೆಯ ಪ್ರಕರಣ

# ಗೀತೆಯೂ ಸನಾತನಸಂಸ್ಕೃತಿಯೂ

ನಾವು ಇಲ್ಲಿಯ ವರೆಗೆ ಗೀತಾಸಂದೇಶದ ವಿಷಯವನ್ನು ವಿವಿಧ ದೃಷ್ಟಿಯಿಂದ ವಿವೇಚಿಸಿದೆವಷ್ಟೆ. ಇನ್ನು, ಗೀತಾಸಂದೇಶಕ್ಕೆ ಸಂಬಂಧಿಸಿದ ಕೆಲವು ಹೊಸ ವಿಷಯುಗಳನ್ನು ಕುರಿತು ಹೇಳುವೆವು. ಈ ಪ್ರಕರಣದಲ್ಲಿ, ಗೀತೆಯೂ ಸನಾತನ ಸಂಸ್ಕೃತಿಯೂ ಎಂಬ ವಿಷಯುವನ್ನು ಕೈಕೊಳ್ಳುವೆವು.

ಗೀತೆಯು ಈಗ ಸುಶಿಕ್ಷಿತರ ಸರ್ವಮಾನ್ಯವಾದ ಗ್ರಂಥವಾಗಿದೆಯೆಂದು ಹೇಳಲು ಅಡ್ಡಿ ಇಲ್ಲ. ಗೀತೆಯು ಗೊತ್ತಿಲ್ಲದವನು ಸುಶಿಕ್ಷಿತನಲ್ಲವೆಂದು ಹೇಳುವವರೆಗೆ ಇದರ ಲೋಕಪ್ರಿಯತೆಯು ಹೋಗಿದೆ. ಗೀತೆಯನ್ನು ಪಾರಾಯಣ ಮಾಡುವುದು ಶಿಷ್ಟಸಂಪ್ರದಾಯವಾಗಿದೆ. ಗೀತೆಯ ಶ್ಲೋಕಗಳನ್ನು ಉದಾಹರಿಸುವುದೊಂದು ಆಧುನಿಕ ಪದ್ಧತಿಯಾಗಿದೆ. ಆದರೆ, ಹೀಗೆ ಗೀತೆಯ ಅಭ್ಯಾಸದ ಕ್ಷೇತ್ರವು ಹಬ್ಬಿದ್ದರೂ, ಅದು ಆಳವಾಗಿಲ್ಲ. ಮೇಲೆ ಮೇಲೆ ತೇಲಿಸಿ ಓದುವವರೇ ಹೆಚ್ಚು. ಆದರಿಂದ, ಗೀತೆಯ ನಿಜವಾದ ತತ್ವಗಳ ವಿಪರ್ಯಾಸವಾಗಿ ಹಾನಿಯೂ ಆಗಹತ್ತಿದೆ. ಏಕೆಂದರೆ, 'ಬಿಭೇತಿ ಅಲ್ಪಶ್ರುತಾದ್ವೇದೋ ಮಾಮಯಂ ಪ್ರಚಲಿಷ್ಯತಿ–ಎಂದರೆ ಅಲ್ಪ ಅಭ್ಯಾಸಿಯು ನನ್ನನ್ನು ಸಿಕ್ಕಸಿಕ್ಕಂತೆ

ಆಹ್ಲಾದಿಸುವನೆಂದು ವೇದವು ಅಂಜುತ್ತದಂತೆ ! ಹಾಗೆಯೇ ಗೀತೆಯನ್ನು ಅರೆಗಲಿತವನು ತನ್ನನ್ನು ಗೊಂದಲದಲ್ಲಿ ಹಾಕುವನೆಂದು ಗೀತೆಯು ಬಹಳ ಹೆದರುತ್ತದೆ. ಆದಕಾರಣ ಹಾಗೆ ಆಗದಿರಲಿಕ್ಕೆ ನಾವು, ಗೀತೆಯು ಹೇಳುವ ಸನಾತನ ತತ್ತ್ವಗಳಾವುವೆಂಬುದನ್ನೂ ಜಗತ್ತಿಗೆ ಅವುಗಳ ಮಹತ್ತ್ವವು ಎಷ್ಟಿರುತ್ತದೆಂಬುದನ್ನೂ ದೃಢವಾಗಿ ಅರಿತುಕೊಳ್ಳಬೇಕು. ಹಿಂದೆ ಹೇಳಿದ ಗೀತಾಸಂದೇಶದಿಂದ ಆ ಮುಖ್ಯ ತತ್ತ್ವಗಳು ಯಾವುವೆಂಬುದು ತಾನಾಗಿಯೇ ಗೊತ್ತಾಗುತ್ತದೆ. ಆದರೆ, ವಾಚಕರ ಸುಲಭ ತಿಳವಳಿಕೆಗಾಗಿ ಕೆಲವು ತತ್ತ್ವಗಳ ದಿಗ್ದರ್ಶನವನ್ನು ಮಾಡುವೆವು.

"ನಾವು ನಮ್ಮ ಗೀತಾಪ್ರಕಾಶ ಗ್ರಂಥದಲ್ಲಿ (ಮೊದಲನೆಯ ಭಾಗ ಗ್ರಂಥಪರಿಚಯ. ಪು. ೬) ನಮ್ಮ ಧರ್ಮದ ಸಂಸ್ಕೃತಿಯ,ತತ್ತ್ವಜ್ಞಾನದ ತತ್ತ್ವಗಳು ಗೀತೆಯೆಂಬೀ ಕಿರಿದಾದ ಕರಂಡಕದಲ್ಲಿ, ಸಣ್ಣದಾದ ಸಂಪುಷ್ಟದಲ್ಲಿ ಸುರಕ್ಷಿತವಾಗಿ ಕಾಯ್ದಿಡಲ್ಪಟ್ಟಿವೆ, ಎಂಬುದಾಗಿ ಬರೆದಿರುವೆವು. ಅದನ್ನೇ ನಾವು ಇಲ್ಲಿ ತುಸು ವಿಸ್ತರಿಸಿ ತೋರಿಸುವೆವು.

ಗೀತೆಯ ಪ್ರಸ್ತಾವನೆಯನ್ನೋದಿದರೆ, ಕೃಷ್ಣನು ಅರ್ಜುನನಿಗೆ ಸನಾತನ ಸಂಸ್ಕೃತಿಯ ತತ್ತ್ವಗಳನ್ನು ಹೇಳುವುದಕ್ಕೋಸ್ಕರವೇ ಗೀತೆಯನ್ನು ಪ್ರಾರಂಭಿಸಿದ್ದಾನೆಂಬುದು ಗೊತ್ತಾಗುವುದು. ಅರ್ಜುನನು ಬಾಂಧವಾದಿಗಳ ಸಲುವಾಗಿ ಮರುಗುತ್ತಿರುವಾಗ, ಕೃಷ್ಣನು, ಅರ್ಜುನನು ಮಾಡುವ ಶೋಕವು ಅನಾರ್ಯಜುಷ್ಟವಾದುದು,ಎಂದರೆ ಆರ್ಯರಿಗೆ ಸಲ್ಲತಕ್ಕುದಲ್ಲವೆಂಬುದಾಗಿ ಮೊದಲಿಗೇನೇ ಹೇಳಿರುವನು. ಅದು ಏಕೆ ಸಲ್ಲತಕ್ಕದ್ದಲ್ಲವೆಂಬುದನ್ನು ನೋಡುವ. ಶ್ರೀಕೃಷ್ಣನು, ಮೊಟ್ಟ ಮೊದಲಿಗೇನೇ, ಪಂಡಿತರು ಸತ್ತವರ ಸಲುವಾಗಿ ಅಳುವವರಲ್ಲವೆಂದು ಹೇಳಿದ್ದಾನೆ. ಇದರಿಂದ, ಜೀವವು ನಿತ್ಯವೆಂಬುದು ಸನಾತನಸಂಸ್ಕೃತಿಯ ಒಂದು ತತ್ತ್ವವಾಗಿರುತ್ತದೆಂದು ಶ್ರೀಕೃಷ್ಣನ ಅಭಿಪ್ರಾಯವಿದ್ದುದು ಸ್ಪಷ್ಟವಾಗುವುದಿಲ್ಲವೆ ? ಇದರಿಂದ, ಪುನರ್ಜನ್ಮದ ತತ್ತ್ವವು ತಾನೇ ಸಿದ್ಧವಾಗುತ್ತದೆ. ಹೀಗೆ ಜೀವವು ನಿತ್ಯವೆಂಬ ತತ್ತ್ವವೂ ಪುನರ್ಜನ್ಮದ ತತ್ತ್ವವೂ ಸನಾತನ ಸಂಸ್ಕೃತಿಯ ತತ್ತ್ವಗಳೆಂದು ಗೀತೆಯ ಅಭಿಪ್ರಾಯವಾಯಿತು.

ಅದೇ ಮೇರೆಗೆ ನಾವು ೫ನೆಯ ಪ್ರಕರಣದಲ್ಲಿ ಹೇಳಿದ ಗೀತೆಯ

ತಳಹದಿಯ ತತ್ತ್ವಗಳೆಲ್ಲವೂ ಸನಾತನ ಸಂಸ್ಕೃತಿಯ ಮೂಲತತ್ತ್ವಗಳೇ. ಮಿಕ್ಕ ಧರ್ಮಗಳಲ್ಲಿ ಆ ಕಲ್ಪನೆಗಳು ಕೆಲಮಟ್ಟಿಗೆ ಕಂಡುಬರುತ್ತಿದ್ದರೂ, ಅವುಗಳ ವ್ಯಾಪಕ ಕಲ್ಪನೆಯು ಗೀತೆಯಲ್ಲಿ ಕಂಡುಬರುವಂತೆ ಮಿಕ್ಕೆಲ್ಲಿಯೂ ಕಂಡು ಬರುವುದಿಲ್ಲ. ಉದಾ: ದೇವರ ಕಲ್ಪನೆಯನ್ನು ತೆಗೆದುಕೊಳ್ಳಿರಿ. ಈ ಕಲ್ಪನೆಯೇನೋ ಸಾಮಾನ್ಯವಾಗಿ ಎಲ್ಲ ಧರ್ಮಗಳಲ್ಲಿಯೂ ಕಂಡು ಬರುತ್ತದೆ. ಆದರೆ, (೧) ದೇವರ ಅವತಾರತತ್ತ್ವ, (೨) ವಿಭೂತಿ ತತ್ತ್ವ ಮತ್ತು (೩) ವಿಶ್ವರೂಪದರ್ಶನ ಇವೇ ಮುಂತಾದವುಗಳನ್ನು ನಾವು ಮಿಕ್ಕ ಧರ್ಮಗಳಲ್ಲಿ ಇಷ್ಟು ಪೂರ್ಣತೆಯನ್ನು ಹೊಂದಿರುವುದನ್ನು ಕಾಣುವುದಿಲ್ಲ,

ಆದರೆ. ಈ ಮೂಲಭೂತ ತತ್ತ್ವಗಳನ್ನು ಗೀತೆಯು ಗೃಹಿತವಾಗಿ ತೆಗೆದುಕೊಂಡಿರುವುದರಿಂದ, ಅವುಗಳ ವಿಷಯವಾಗಿ ಹೆಚ್ಚಿಗೆ ಹೇಳದೆ, ಗೀತೆಯು ವಿಸ್ತಾರವಾಗಿ ಚರ್ಚಿಸಿರುವ ಸಾಧನಮಾರ್ಗದ ವಿಶಿಷ್ಟತತ್ತ್ವಗಳನ್ನು ಕುರಿತು ಮಾತ್ರ ಹೇಳುವೆವು. ಗೀತೆಯ ಸಂದೇಶದಲ್ಲಿ ಈ ಕೆಳಗೆ ಕಾಣಿಸಿದ ವಿಶಿಷ್ಟ ತತ್ತ್ವಗಳು ಅಡಕವಾಗಿರುತ್ತವೆ. ಅವು ಯಾವುವೆಂದರೆ,

(೧) ಗೀತೆಯ ಗುರಿಯು ಮಿಕ್ಕ ಯಾವತ್ತು ಧರ್ಮಗಳ ಗುರಿಗಳಿಗಿಂತಲೂ ವಿಲಕ್ಷಣವಾದುದು, ಉಚ್ಚವಾದುದು, ದೂರತಮವಾದುದು.

(೨) ಮೋಕ್ಷದ ಗುರಿಯನ್ನು ಮುಟ್ಟುವುದಕ್ಕೆ ಗೀತೆಯು ಹೇಳುವ ಸಾಧನಗಳೂ ವಿಲಕ್ಷಣವಾದವುಗಳು.

(೩) ಗೀತೆಯು ಹೇಳಿದ ಪರಮಧರ್ಮದ ಕಲ್ಪನೆಯು ಮಿಕ್ಕಾವ ಧರ್ಮದಲ್ಲಿಯೂ ಕಂಡು ಬರುವುದಿಲ್ಲ.

(೪) ಗೀತೆಯ ಪರಮಧರ್ಮದ ಕಲ್ಪನೆಯಿಂದ ಕೆಲವು ಉಪಸಿದ್ಧಾಂತಗಳು ಹೊರಡುತ್ತವೆ. ಅವನ್ನು ನಾವು ಸನಾತನಧರ್ಮದ ಹೊರತಾಗಿ ಮಿಕ್ಕಾವ ಧರ್ಮದಲ್ಲಿಯೂ ಕಾಣೆವು. ಉದಾ—(ಅ) ಸ್ವಧರ್ಮದ ತತ್ತ್ವವು (ಆ) ವರ್ಣಾಶ್ರಮದ ತತ್ತ್ವವು (ಇ) ನಿಷ್ಕಾಮಕರ್ಮದ ತತ್ತ್ವವು. (ಈ) ಅಧಿಕಾರದ ತತ್ತ್ವವು—ಇವೇ ಮುಂತಾದವುಗಳು.

(೧) ಗೀತೆಯ ಗುರಿಯು ಮೋಕ್ಷವು. ಗೀತೆಯಲ್ಲಿ ಕ್ಷಣಕ್ಷಣಕ್ಕೆ ಈ ಗುರಿಯ ನೆನಪು ಕೊಡಲ್ಪಟ್ಟಿದೆ. ಸುಮಾರು ೭೦–೭೫ ಶ್ಲೋಕಗಳಲ್ಲಿ ಅದರ ಉಲ್ಲೇಖವಿರುವದು. ಅದಕಾರಣ, ಗೀತೆಯ ಮುಖ್ಯ ಪ್ರಯೋಜನವು ಮೋಕ್ಷವೆಂದೆನ್ನುವದಕ್ಕೆ ಅಭ್ಯಂತರವೇನಿದೆ ? ಮೋಕ್ಷದಲ್ಲಿ ಅಡಕವಾಗಿರುವ ಮೊದಲನೆಯ ಕಲ್ಪನೆಯು ಪಾಪಕ್ಷಯ. ಅದು ಕರ್ಮಬಂಧನಿವೃತ್ತಿ, ಅವಿದ್ಯಾನಿವೃತ್ತಿ, ಕರ್ಮದ ಅಲೇಪ, ಅಶುಭದಿಂದ ಬಿಡುಗಡೆ, ಸಂಸಾರನಿವೃತ್ತಿ, ಭೂತಪ್ರಕೃತಿಮೋಕ್ಷ, ಪುನರ್ಜನ್ಮನಿವೃತ್ತಿ, ಮುಂತಾದ ರೂಪಗಳಲ್ಲಿ ಈ ಕೆಳಗೆ ಕಾಣಿಸಿದ* ಶ್ಲೋಕಗಳಲ್ಲಿ ಬಂದಿರುವದು. ಮೋಕ್ಷದ ಕಲ್ಪನೆಯಲ್ಲಿ ಅಡಕವಾಗಿರುವ ಆನಂದದ ಕಲ್ಪನೆಯು ಅಕ್ಷಯಸುಖ, ಶಾಂತಿ, ಸಿದ್ಧಿ, ಭಗವತ್ಪ್ರಾಪ್ತಿ, ಬ್ರಹ್ಮಪ್ರಾಪ್ತಿ, ಪರಮಪದ, ಪರಮಗತಿ, ಅನುತ್ತಮಗತಿ, ಅವ್ಯಯಪದಪ್ರಾಪ್ತಿ, ಅಮೃತತ್ವಪ್ರಾಪ್ತಿ, ಪರಮಶ್ರೇಯಃಪ್ರಾಪ್ತಿ, ಕೃತಕೃತ್ಯ, ಮದ್ಭಾವಪ್ರಾಪ್ತಿ, ಅನಾಮಯಪದಪ್ರಾಪ್ತಿ ಇವೇ ಮುಂತಾದ ಶಬ್ದಗಳಿಂದ ಕೆಳಗಿನ ಶ್ಲೋಕಗಳಲ್ಲಿ ಬಂದಿದೆ. †

(೨) ಆ ಮೋಕ್ಷವನ್ನು ಮುಟ್ಟುವದಕ್ಕೆ ಗೀತೆಯು ಹೇಳುವ ಸಾಧನಗಳೂ ವಿಲಕ್ಷಣವಾಗಿವೆ. ಮುಖ್ಯಸಾಧನಗಳೆಂದರೆ ಕರ್ಮ, ಜ್ಞಾನ ಮತ್ತು ಭಕ್ತಿ. ಕರ್ಮದಲ್ಲಿ ಸಂನ್ಯಾಸ ಮತ್ತು ಯೋಗ. ಇವುಗಳ ಸನಾತನ ಸಂಸ್ಕೃತಿಯ ಕಲ್ಪನೆಗೂ ಮುಕ್ಕ ಧರ್ಮಗಳಲ್ಲಿ ಕಂಡು

---

* ಸರ್ವಪಾಪಕ್ಷಯಕ್ಕೆ ಆಧಾರಗಳು... ೩-೧೩, ೪-೧೪, ೪-೧೬, ೪-೨೧, ೪-೨೨, ೪-೨೩, ೪-೩೨, ೪-೩೬, ೫-೩, ೫-೭, ೫-೧೭, ೫-೨೪, ೬-೨೮, ೭-೨೮, ೭-೨೯, ೮-೧೫, ೮-೧೬, ೯-೧೨, ೯-೨೮, ೧೦-೩, ೧೨-೭, ೧೩-೨೪, ೧೩-೩೨

†ಮುಕ್ತಿಯಲ್ಲಿ ಸುಖಾವಿರ್ಭಾವಕ್ಕೆ ಆಧಾರಗಳು— ೨-೧೫, ೨-೫೧, ೨-೭೧, ೨-೭೨, ೩-೪, ೩-೧೧, ೩-೧೯, ೪-೧೦, ೪-೧೨, ೪-೩೯, ೪-೪೦, ೫-೬, ೫-೧೨, ೫-೨೧, ೫-೨೯, ೬-೧೫, ೬-೨೭, ೬-೨೮, ೬-೪೫, ೭-೧೮, ೭-೨೩, ೮-೫, ೮-೬, ೮-೧೦, ೮-೧೩, ೮-೨೧, ೯-೩೨, ೧೧-೫೫, ೧೨-೧೦, ೧೨-೧೨, ೧೨-೨೦, ೧೩-೭, ೧೩-೨೯, ೧೪-೧, ೧೪-೧೯, ೧೪-೨೭, ೧೫-೫, ೧೬-೨೨, ೧೮-೫೫, ೧೮-೫೬, ೧೮-೬೨.

ಬರುವ ಕಲ್ಪನೆಗೂ ಭೇದವಿದೆ. ಸಂನ್ಯಾಸದಲ್ಲಿ ಸೇರಿರುವ ಕಾಮಕ್ರೋಧಾದಿಗಳನ್ನು ಬಿಡುವ ಕಲ್ಪನೆಯು ಸಾಮಾನ್ಯವಾಗಿ ಎಂಕ್ಕ ಧರ್ಮಗಳಲ್ಲಿ ಕಂಡುಬರುತ್ತಿದ್ದರೂ ಅಹಂಕಾರ ಮಮಕಾರಗಳನ್ನು ಬಿಡುವ ಕಲ್ಪನೆಗೆ ಸನಾತನ ಧರ್ಮವು ಕೊಡುವಷ್ಟು ಮಹತ್ವವು ಎಂಕ್ಕ ಕಡೆಗೆ ಕಂಡು ಬರುವುದಿಲ್ಲ. ಯೋಗದ ಎಂದರೆ ಈಶ್ವರಾರ್ಪಣಬುದ್ಧಿಯ ಕಲ್ಪನೆಯೂ ಸನಾತನ ಧರ್ಮದ ಕಲ್ಪನೆಯೇ. ಬೌದ್ಧಿಕಜ್ಞಾನಕ್ಕೆ ಸನಾತನ ಧರ್ಮವು ನಿಜವಾದ ಜ್ಞಾನವೆಂದೆನ್ನುವುದಿಲ್ಲ. ಭಕ್ತಿಯ ಕಲ್ಪನೆಯು ಎಂಕ್ಕ ಧರ್ಮಗಳಲ್ಲಿ ಕಂಡುಬರುತ್ತಿದ್ದರೂ ಆ ಪ್ರೇಮಪ್ರವಾಹವು ಪರಮಾತ್ಮನೊಡನೆ ಸಾಯುಜ್ಯ ಮುಕ್ತಿಯನ್ನು ಪಡೆಯುವಷ್ಟು ಉತ್ಕಟವಾದ ರೂಪದಲ್ಲಿ ಎಂಕ್ಕಕಡೆಗೆ ಕಂಡುಬರುವದಿಲ್ಲ.

(೩) ಗೀತೆಯು ಹೇಳಿದ ಸ್ವವಿಹಿತವೃತ್ತಿಯಿಂದಲೂ ಭಕ್ತಿಯಿಂದಲೂ ಭಗವದಾರಾಧನೆ ಮಾಡುವುದೇ ಪರಮಧರ್ಮವೆಂಬ ಕಲ್ಪನೆಯು ಎಂಕ್ಕ ಧರ್ಮಗಳಲ್ಲಿ ಕಂಡುಬರುವದಿಲ್ಲ. ಅದರೊಳಗಿನ ಒಂದು ಅಥವಾ ಎರಡು ಅಂಗಗಳಿಗೆ ಪ್ರಾಧಾನ್ಯವನ್ನು ಅವು ಕೊಡುತ್ತಿರಬಹುದು. ಆದರೆ, ಅವೆಲ್ಲವೂ ಕೂಡಿದರೇನೇ ಪರಮಧರ್ಮವಾಗುತ್ತದೆಂಬ ಗೀತೆಯ ಸಂದೇಶವು ಶುದ್ಧ ಸನಾತನಧರ್ಮದ ಸಂದೇಶವು. ಹಾಗೆಯೇ ಅದರಿಂದ ಹೊರಡುವ ಉಪಸಿದ್ಧಾಂತಗಳನ್ನೂ ನಾವು ಅನ್ಯತ್ರ ಕಾಣುವುದಿಲ್ಲ. ಉದಾ—(ಅ) ಸ್ವಧರ್ಮದ ತತ್ವವನ್ನು ತೆಗೆದುಕೊಳ್ಳುವ. ಬಾಹ್ಯದೃಷ್ಟಿಯನ್ನು ಕೊಡುವ ಧರ್ಮಗಳೇ ಬಹಳ. ಅತ್ಯಂತ ಉದಾತ್ತವಾದ ಧ್ಯೇಯಗಳನ್ನು ರಾಷ್ಟ್ರದ ಮುಂದಿಟ್ಟರಾಯಿತೆಂದು ಅವು ಬಗೆಯುತ್ತವೆ. ಮತ್ತು ಪ್ರತಿಯೊಬ್ಬನೂ ಆ ಧ್ಯೇಯಗಳನ್ನು ಮುಟ್ಟುವ ಶಕ್ತಿಯುಳ್ಳವನಾಗಬಹುದೆಂದು ಅವು ಸಾರುತ್ತವೆ. ಆದರೆ ಗೀತೆಯ ಉಪದೇಶವು ಇದಕ್ಕೆ ಭಿನ್ನವಿದೆ. ಉದಾತ್ತ ಧ್ಯೇಯಗಳನ್ನಿಟ್ಟರೆ ಸಾಲದು. ಆ ಧ್ಯೇಯಗಳನ್ನು ಮುಟ್ಟುವುದಕ್ಕೆ ಅಂತರ್ದೃಷ್ಟಿಯು ಅಗತ್ಯವಾದುದೆಂದೂ ಪ್ರತಿಯೊಬ್ಬನ ಜೀವಶಕ್ತಿಯು ಬೇರೆ ಬೇರೆ ಇರುವುದರಿಂದ, ಎಲ್ಲರೂ ಆ ಧ್ಯೇಯಗಳನ್ನು ಮುಟ್ಟೇಮುಟ್ಟುವರೆಂದು ತಿಳಿಯಬಾರದೆಂದೂ ಗೀತೆಯ ನಿಸ್ಸಂದಿಗ್ಧವಾದ ಉಪದೇಶವಿರುತ್ತದೆ.

ಗೀತೆಯು ಶುದ್ಧವಾಗಿ ಅಂತರ್ದೃಷ್ಟಿಯನ್ನು ಕೊಡುವ ಗ್ರಂಥವು, ಅದು ವ್ಯವಹಾರ್ಯವಾದ ಧ್ಯೇಯವನ್ನಿಡುವ ಗ್ರಂಥವು. ಪರಾನುಕರಣವನ್ನು ಅದು ಬಲವಾಗಿ ನಿಂದಿಸುತ್ತದೆ. ಮಹತ್ವಾಕಾಂಕ್ಷೆಯನ್ನು ಸಿಕ್ಕಸಿಕ್ಕ ರೀತಿಯಲ್ಲಿ ಬೆಳೆಸಲಿಕ್ಕೆ ಹೇಳುವುದಿಲ್ಲ.

> ಅವರವರ ಯೋಗ್ಯತೆಯನರಿತು ಪ್ರೇರಕನಾಗಿ ।
> ಅವರಿಂದ ನುಡಿಸಿ, ಅವರ ನುಡಿಗಳಿಗೆ ಹಿಗ್ಗಿ ।
> ಅವರಿಗೊಲಿವೆ ನಮ್ಮ ಪುರಂದರವಿಠ್ಠಲ ।
>
> —ಪುರಂದರ ದಾಸ

ಸಾರಾಂಶ, ಗೀತೆಯು ಕೇವಲ ಕಾಲ್ಪನಿಕವಾದ ಧ್ಯೇಯವನ್ನು ಆಕಾಶದಲ್ಲಿ ತೂಗಬಿಟ್ಟು ಅದನ್ನು ಮುಟ್ಟಲು ಹೇಳುವುದಿಲ್ಲ.

(ಆ) ವರ್ಣಾಶ್ರಮ ಧರ್ಮದ ತತ್ತ್ವವು–ಗೀತೆಯ ಚಾತುರ್ವರ್ಣ್ಯವನ್ನು ಪರಮಾತ್ಮನು ಮೂಲತಃ ಗುಣಕರ್ಮಗಳ ಮೇಲಿಂದ ವಿಭಾಗಿಸಲ್ಪಟ್ಟಿರುವನೆಂದು ನಾವು ಹೇಳಿದ್ದೇವೆ. ಇದರಿಂದ, ಗೀತೆಯು ಜನ್ಮಕ್ಕೆ ಪ್ರಾಧಾನ್ಯವನ್ನು ಕೊಡುವುದೇ ಇಲ್ಲವೆಂದು ಕೆಲವರು ವಾದಿಸುತ್ತಾರೆ. ಆದರೆ ಇದು ತಪ್ಪು. ವರ್ಣಾಶ್ರಮಧರ್ಮವೆಂದರೆ, ಸಾತ್ವಿಕಾದಿಗುಣಕರ್ಮಗಳಿಗೆ ಆದಷ್ಟು ವ್ಯವಹಾರ್ಯವಾದ ರೂಪವನ್ನು ಕೊಡುವ ಒಂದು ಪ್ರಯತ್ನ. ಇಂಥ ಪ್ರಯತ್ನವು ಸನಾತನಧರ್ಮದ ವೈಶಿಷ್ಟ್ಯ. ಅದನ್ನು ನಾವು ಮಿಕ್ಕೆಲ್ಲಿಯೂ ಕಾಣಲಾರೆವು. ಜನ್ಮದ ಹೊರತು ಮಿಕ್ಕಾವದೊಂದು ಹೆಚ್ಚು ಸೂಕ್ಷ್ಮವಾದ ಒರೆಗಲ್ಲು ಸಿಕ್ಕರೆ ಬೇಡವೆಂತಿಲ್ಲ. ಆದರೆ,ಅದು ಶಕ್ಯವಿಲ್ಲವೆಂದು ಸನಾತನ ಧರ್ಮದ ಅಭಿಪ್ರಾಯ. ಗೀತೆಯು ಅರ್ಜುನನಿಗೆ ಯುದ್ಧಮಾಡು ಎಂಬುದಾಗಿ ಮಾಡಿದ ಉಪದೇಶವು ಅರ್ಜುನನ ಕ್ಷತ್ರಿಯ ಜನ್ಮದ ಮೇಲೆ ಅವಲಂಬಿಸಿ ಮಾಡಲ್ಪಟ್ಟಿರುವುದು. ನೀನು ಕ್ಷತ್ರಿಯನು ಎಂದರೆ ಕ್ಷತ್ರಿಯ ಜನ್ಮದಲ್ಲಿ ಹುಟ್ಟಿದವನು, ಎಂದು ಶ್ರೀಕೃಷ್ಣನ ಉದ್ದೇಶವಲ್ಲದೆ ಕೇವಲ ಕ್ಷತ್ರಿಯ ಸ್ವಭಾವದವನು ಎಂಬುದು ಶ್ರೀಕೃಷ್ಣನ ಉದ್ದೇಶವಲ್ಲ. ಅರ್ಜುನನಲ್ಲಿ ಕ್ಷತ್ರಿಯಸ್ವಭಾವವೂ ಕ್ಷತ್ರಿಯ ಜನ್ಮವೂ-ಎರಡೂ ಮಿಲಿತವಾಗಿದ್ದವು. ಆದಕಾರಣ, ಎರಡೂ ದೃಷ್ಟಿಯಿಂದ, ಆ ಉಪದೇಶವು ಶೋಭಿಸುತ್ತದೆ. ಆದರೆ ಗೀತೆಯು

ಮೇಲಿಂದ, ಸಮಾಜವನ್ನು ಕೇವಲ ಗುಣಕರ್ಮದಿಂದ ನಾಲ್ಕು ವರ್ಣಗಳಲ್ಲಿ ವಿಭಾಗ ಮಾಡುವ ತತ್ತ್ವವು ಹೊರಡುವುದಿಲ್ಲವೆಂದು ಸ್ಪಷ್ಟವಾಗಿ ಹೇಳಬಹುದು. ಆ ತರಹದ ವಾಕ್ಯವು ಗೀತೆಯಲ್ಲಿ ಒಂದೂ ಇಲ್ಲ. ಇದಕ್ಕೆ ವಿರುದ್ಧವಾಗಿ ಜನ್ಮವನ್ನೂ ಒಪ್ಪಿ ನಡೆದಿರುವ ವಾಕ್ಯಗಳನ್ನು† ನಾವು ಅನೇಕ ಕಡೆಗೆ ಕಾಣಬಹುದು. ಉದಾ-೨ ೩೧ ರಲ್ಲಿ ಸ್ವಧರ್ಮದೃಷ್ಟಿಯಿಂದ ವಿಚಾರಮಾಡಿ ಯುದ್ಧಮಾಡಲಿಕ್ಕೆ ಹೇಳಿರುವುದು. ಕ್ಷತ್ರಿಯನಿಗೆ ಧರ್ಮಸಮ್ಮತವಾದ ಯುದ್ಧಕ್ಕಿಂತ ಹೆಚ್ಚಿನದು ಮತ್ತಾವದೂ ಇಲ್ಲವೆಂದೂ ಹೇಳಿದೆ. ಪರಮಾತ್ಮನು ಕರ್ಮಮಾಡದಿದ್ದರೆ, ಜಗತ್ತೇ ಹಾಳಾಗುವುದೆಂದೂ ವರ್ಣಸಂಕರಕ್ಕೆ ತಾನು ಕಾರಣನಾಗುವನೆಂದೂ ಹೇಳಿದ್ದಾನೆ (೩.೨೪). ಯೋಗಭ್ರಷ್ಟನಾದವನ ಯೋಗಸಾಧನವು ವ್ಯರ್ಥ ಹೋಗದೆ, ಆತನು ಶ್ರೀಮಂತರ ಅಥವಾ ಯೋಗಿಗಳ ಕುಲದಲ್ಲಿ ಹುಟ್ಟಿ ಪುನಃ ತನ್ನ ಸಾಧನೆಯನ್ನು ಮಾಡಿಕೊಳ್ಳುತ್ತಾನೆಂದು ಹೇಳಿದೆ (೬.೪೧). ಸ್ತ್ರೀ, ವೈಶ್ಯ, ಶೂದ್ರ ಮುಂತಾದವರ ಮತ್ತು ಪಾಪಯೋನಿಗಳಲ್ಲಿ ಹುಟ್ಟಿದವರ ಉಲ್ಲೇಖ ಬಂದಿದೆ (೯.೩೨). ಮತ್ತು ಬ್ರಾಹ್ಮಣರೂ ರಾಜರ್ಷಿಗಳೂ ಪುಣ್ಯವಂತರೆಂದು ಹೇಳಿದೆ (೯.೩೩). ಸತ್ತ್ವಗುಣವು ಬೆಳೆದಾಗ ಸತ್ತರೆ, ಸಾತ್ವಿಕ ಜನ್ಮವನ್ನು ಹೊಂದುತ್ತಾನೆಂದೂ ರಾಜಸವು ಬೆಳೆದಾಗ ಸತ್ತರೆ, ಕರ್ಮಾಸಕ್ತರಲ್ಲಿ ಜನ್ಮತಾಳುತ್ತಾನೆಂದೂ ತಮಸ್ಸು ಬೆಳೆದಾಗ ಸತ್ತರೆ, ಮೂಢಯೋನಿಗಳಲ್ಲಿ ಜನ್ಮತಾಳುತ್ತಾನೆಂದೂ ಹೇಳಿದೆ (೧೬.೧೪, ೧೫). ಆತನನ್ನು ದ್ವೇಷಿಸುವ ಕ್ರೂರರಾದ ನರಾಧಮರನ್ನು ಆತನು ಪುನಃ ಪುನಃ ಆಸುರಯೋನಿಗಳಲ್ಲಿಯೇ ಹುಟ್ಟಿಸುತ್ತಾನೆ (೧೬.೧೯); ಮತ್ತು ಆ ಮೂಢರು ಮೇಲಿಂದ ಮೇಲೆ ಆಸುರ ಜನ್ಮಗಳಲ್ಲಿ ಹುಟ್ಟಿ, ಕೊನೆಯವರೆಗೆ ಆತನನ್ನು ಪಡೆಯದಲೇ ಹೋಗುತ್ತಾರೆ (೧೬. ೨೦). ಇದಲ್ಲದೆ, ಮೊದಲನೆಯ ಅಧ್ಯಾಯದಲ್ಲಿ ಜಾತಿಧರ್ಮ, ವರ್ಣಾಶ್ರಮಧರ್ಮ, ವರ್ಣಸಂಕರ ಇವುಗಳ ಉಲ್ಲೇಖವು ಬಂದಿವೆ. ಆದಕಾರಣ, ಗೀತೆಯಲ್ಲಿಯ ವರ್ಣಾಶ್ರಮವು ಜನ್ಮದ ಮೇಲೆ

---

† ಜನ್ಮವನ್ನು ಒಪ್ಪುವದಕ್ಕೆ ಆಧಾರಗಳು—೨.೩೧; ೨.೩೭; ೩.೨೪; ೬.೪೧; ೬.೪೨; ೯.೩೨; ೯.೩೩ ೧೨.೧೫; ೧೬.೧೯; ೧೬.೨೦.೧.೪೦; ೪೧.೪೨; ೪೩.೪೪

ಕಟ್ಟಲ್ಪಟ್ಟಿಲ್ಲವೆಂದು ಯಾವ ರೀತಿಯಿಂದಲೂ ಹೇಳಲಿಕ್ಕೆ ಬರಲಾರದು. ಆ ಪ್ರಕಾರ ಮಾಡುವುದು ಸರಿಯೋ ಅಲ್ಲವೋ ಎಂಬುದನ್ನು ಚರ್ಚಿಸುವುದಾದಲ್ಲಿ, ಬೇರೆ ರೀತಿಯಿಂದ ಚರ್ಚಿಸಬಹುದು. ಗೀತೆಯು ಮಾತ್ರ ಅದರ ಆಧಾರದ ಮೇಲೆ ರಚಿಸಲ್ಪಟ್ಟಿಲ್ಲವೆಂದು ವಾದಿಸಿ ಪ್ರಯೋಜನವಿಲ್ಲ. ಗೀತೆಯಲ್ಲಿಯ ನಿಯತಕರ್ಮ, ಕಾರ್ಯಕರ್ಮ, ಸಹಜಕರ್ಮ ಇವೆಲ್ಲವೂ ಜನ್ಮಕ್ಕೆ ಸಂಬಂಧಿಸಿದವುಗಳೇ ಹೊರತು, ಗುಣಕ್ಕೆ ಸಂಬಂಧಿಸಿದವುಗಳಲ್ಲವೆಂಬುದು ಖಂಡಿತ. ಅದೇ ಮೇರೆಗೆ, ವರ್ಣಾಶ್ರಮದ ಬಾಹ್ಯಸ್ವರೂಪವು ಕಾಲಕ್ಕೆ ತಕ್ಕಂತೆ ಬದಲಾಗಬಹುದಾದರೂ ಅದರ ಅಂತರಂಗ ತತ್ತ್ವವು ತ್ರಿಕಾಲಾಬಾಧಿತವಾದ ತತ್ತ್ವವೆಂಬುದೂ ಖಂಡಿತ.

ಗೀತೆಯಾಗಲಿ, ಸನಾತನ ಧರ್ಮವಾಗಲಿ, ಮನುಷ್ಯನು ಆಕಸ್ಮಿಕವಾಗಿ ಆಕಾಶದಿಂದ ಬಿದ್ದ ಪ್ರಾಣಿಯೆಂದು ತಿಳಿಯುವುದಿಲ್ಲ. ಆತನ ಮೂಲಗುಣಕರ್ಮಗಳಿಗೂ ಆತನ ಸ್ವಭಾವಕ್ಕೂ ನಿಕಟವಾದ ಸಂಬಂಧವಿರುತ್ತನೆಂದು ಅದು ನಂಬುತ್ತದೆ. ಇದು ಸನಾತನಸಂಸ್ಕೃತಿಯ ಸಮಾಜತತ್ತ್ವ. ಇಂದಿಗೂ, ಜಗತ್ತಿನ ಬಹುಶಃ ಯಾವತ್ತು ವ್ಯವಹಾರಗಳೆಲ್ಲವೂ ಜನ್ಮದ ಮೇಲೆ ಅವಲಂಬಿಸಿಯೇ ನಡೆಯುತ್ತವೆಂಬುದನ್ನು ನೋಡಿದರೆ, ಜನ್ಮವು (ಅದು ಸ್ಥೂಲತತ್ತ್ವವಾಗಿದ್ದರೂ) ಸಾಮಾಜಿಕ ತತ್ತ್ವಗಳಲ್ಲಿ ಎಂಥ ಪ್ರಮುಖಸ್ಥಾನವನ್ನು ಆಕ್ರಮಿಸಿರುತ್ತದೆಂಬುದು ಗೊತ್ತಾಗುವುದು. ದೀಕ್ಷೆ ಮತ್ತು ಧರ್ಮಸಂಸ್ಕಾರಗಳಾಗಬೇಕಾದುದು ಜನ್ಮದ ಮೇಲೆ, ತಂದೆಯ ಆಸ್ತಿಯು ಮಗನಿಗೆ ದೊರೆಯುವುದು ಜನ್ಮದಿಂದ; ಅರಸನ ಮಗನು ಪಟ್ಟಕ್ಕೆ ಕುಳಿತುಕೊಳ್ಳುವುದೂ ಜನ್ಮದಿಂದ; ನಾವು ಭಾರತೀಯರು, ಕರ್ನಾಟಕರು ಎಂದು ಮುಂತಾಗಿ ಅಂದುಕೊಳ್ಳುವುದೂ ಜನ್ಮದ ಆಧಾರದಿಂದ. ಇರಲಿ; ಇಲ್ಲಿ ನಾವು ಈ ವಿಷಯವನ್ನು ಚರ್ಚಿಸಲಿಕ್ಕೆ ಕುಳಿತಿಲ್ಲ. ಗೀತೆಯು ಮತ್ತು ಸನಾತನ ಸಂಸ್ಕೃತಿಯು ಸಮಾಜವು ಜನ್ಮದ ಮೇಲೂ ಚಾತುರ್ವರ್ಣ್ಯದ ವಿಭಾಗದ ಮೇಲೆಯೂ ಕಟ್ಟಲ್ಪಟ್ಟಿರುತ್ತದೆಂಬುದನ್ನು ಹೇಳುವುದೇ ನಮ್ಮ ಉದ್ದೇಶ. ವರ್ಣಸಂರಕ್ಷಣವು ಗೀತೆಯ ಧ್ಯೇಯವಲ್ಲದೆ, ವರ್ಣ

ಸಂಕರವು ಧ್ಯೇಯವಲ್ಲ. ಹಾಗೆ ವರ್ಣಸಂಕರವನ್ನು ಧ್ಯೇಯವನ್ನಾಗಿ ಇಟ್ಟುಕೊಳ್ಳುವವರು ಸನಾತನಿಗಳಲ್ಲ.

ಆದರೆ ಶರೀರದೃಷ್ಟಿಯಿಂದ ಮತ್ತು ಸಮಾಜದೃಷ್ಟಿಯಿಂದ ಹೀಗೆ ಜನ್ಮಕ್ಕೆ ಮಹತ್ವವಿದ್ದರೂ, ಮನಸ್ಸು ಮತ್ತು ಆತ್ಮ ಇವುಗಳ ದೃಷ್ಟಿಯಿಂದ ಅದಕ್ಕೆ ಅಷ್ಟು ಮಹತ್ವವಿಲ್ಲವೆಂಬುದೂ ಸನಾತನತತ್ವವೆಂಬುದನ್ನು ಮರೆಯಬಾರದು. ಆದಕಾರಣವೇ, ಅದು ಸರ್ವರಿಗೂ ಮೋಕ್ಷದ್ವಾರವು ಮುಕ್ತವಾಗಿದೆಯೆಂದು ಸಾರಿ ಹೇಳುತ್ತದೆ. ಸ್ತ್ರೀ ವೈಶ್ಯ ಅಂತ್ಯಜರೇ ಮುಂತಾದವರಿಗೆ ಮೋಕ್ಷವಿಲ್ಲವೆಂದು ಅದು ಹೇಳುವದಿಲ್ಲ. ತನ್ನ ತಮ್ಮ ಕರ್ಮದಲ್ಲಿ ನಿರತರಾದವರೆಲ್ಲರಿಗೂ ಮೋಕ್ಷವಿದೆ. ಸಾರಾಂಶ, ನಮ್ಮ ಮೋಕ್ಷವು ಸರ್ವರಿಗೂ ತೆರವಿದೆ. ನಮ್ಮ ಸಮಾಜವು ವರ್ಣಾಶ್ರಮ ತತ್ವವನ್ನು ಸಾಮಾನ್ಯ ನಿಯಮವಾಗಿಯೂ ಪ್ರತ್ಯಕ್ಷಕಾಣುವ ಗುಣಕರ್ಮಗಳನ್ನು ಅಪವಾದಾತ್ಮಕನಿಯಮವಾಗಿಯೂ ಇಟ್ಟುಕೊಂಡು ಎರಡು ಚಕ್ರಗಳ ಮೇಲೆ ಸಾಗತಕ್ಕದ್ದಿರುತ್ತದೆ. ಅವುಗಳಲ್ಲಿ ಒಂದಕ್ಕೇ ಪ್ರಾಧಾನ್ಯವನ್ನು ಕೊಟ್ಟು, ಎರಡನೆಯದನ್ನು ಮರೆತುಬಿಟ್ಟಿರುವದೇ ನಮ್ಮ ಪತನಕ್ಕೆ ಮುಖ್ಯಕಾರಣ. ವರ್ಣಾಶ್ರಮವನ್ನು ಪುರಸ್ಕರಿಸುವುದೆಂದರೆ ಅದರ ಈಗಿನ ಅವನತ ಸ್ವರೂಪವನ್ನು ಪುರಸ್ಕರಿಸುವುದು ಅಲ್ಲವೆಂಬುದನ್ನು ಮಾತ್ರ ಮರೆಯಬಾರದು.

(೩) ಗೀತೆಯಲ್ಲಿ ಹೇಳಿದ ನಿಷ್ಕಾಮಕರ್ಮದ ತತ್ವವನ್ನೂ ನಾವು ಅನ್ಯ ಯಾವ ಧರ್ಮದಲ್ಲಿಯೂ ಕಾಣಲಾರೆವು. ಏಕೆಂದರೆ ಧರ್ಮಗಳು, ಮನುಷ್ಯನು ಉದಾತ್ತವಾದ ಫಲಗಳನ್ನು ಧ್ಯೇಯಗಳನ್ನಾಗಿ ಇಟ್ಟುಕೊಂಡು ಸಕಾಮವಾಗಿ ಕರ್ಮಮಾಡಲು ಅಡ್ಡಿ ಇಲ್ಲವೆಂದು ಹೇಳುತ್ತವೆ. ಎಂಥ ಉದಾತ್ತ ಫಲವಿದ್ದರೂ, ಕರ್ಮವನ್ನು ಸಕಾಮವಾಗಿ ಮಾಡಕೂಡದೆಂದು ಗೀತೆಯು ಬೋಧಿಸುತ್ತದೆ. ಆದುದರಿಂದ ದೇಶಸೇವೆ, ಭಾಷಾಸೇವೆ ಮಾಡುತ್ತೇನೆಂದು ಮನಸ್ಸಿನಲ್ಲಿ ತರುವುದೂ ಕೂಡ ನಮ್ಮಲ್ಲಿ ಗೌಣವು.

ನಾವು ಮುಂಚೆ ಮನಸ್ಸನ್ನು ಬರಿದು ಮಾಡಬೇಕು. ಯಾವುದೇ ತರಹದ ಚಲೋ ಅಥವಾ ಕೆಟ್ಟ ವಿಚಾರಗಳನ್ನೂ ತರಕೂಡದು (೬.೨೫).

ಆಬಳಿಕ, ಅದರಲ್ಲಿ ಕೇವಲ ಭಗವದ್ವಿಚಾರಗಳನ್ನು ಅಂದರೆ ಆತನೇ ಸರ್ವೋತ್ತಮನು, ಸರ್ವಕರ್ತನು, ಎಲ್ಲವನ್ನೂ ಮಾಡಿಸುವವನು— ಎಂಬಿವೇ ವಿಚಾರಗಳನ್ನು ತುಂಬಬೇಕು. ಹೀಗೆ ಪರಮಾತ್ಮಯೋಗ ವನ್ನು ಮಾಡ ಹೇಳಿದುದು ನಮ್ಮ ಸನಾತನ ಧರ್ಮದ ವೈಶಿಷ್ಟ್ಯ. ಇಡೀ ಜೀವನವನ್ನು ಇಷ್ಟು ಅಧ್ಯಾತ್ಮಮಯವನ್ನಾಗಿ ಮಾಡಹೇಳಿದ ಧರ್ಮವು ಮತ್ತೊಂದಿಲ್ಲ.

(ಈ) ಅದೇ ಮೇರೆಗೆ ನಮ್ಮ ಧರ್ಮದಲ್ಲಿ ಅಧಿಕಾರಕ್ಕೆ ಮಹತ್ವ ವಿರುತ್ತದೆ. ಪ್ರತಿಯೊಬ್ಬನು ತನ್ನ ಅಧಿಕಾರಕ್ಕೆ ಯೋಗ್ಯವಾದ ಕರ್ತವ್ಯ ವನ್ನು ಕೈಕೊಳ್ಳಬೇಕು. ಅಯೋಗ್ಯವಾದುದನ್ನು ಇಚ್ಛಿಸುವವನು ಪತಿತನಾಗುವುದೇ ನಿಶ್ಚಯ. ನಮ್ಮಲ್ಲಿ ಇಂಥವರು ಇಂಥ ಕಾರ್ಯ ಗಳನ್ನು ಮಾಡಬಾರದು, ಇಂಥವರಿಗೆ ಇಂಥ ಆಚಾರವಿಚಾರಗಳು ನಿಷಿದ್ಧ ಎಂಬಿವೇ ಮುಂತಾದ ವಿಧಾನಗಳಿಗೆಲ್ಲ ಈ ಅಧಿಕಾರತತ್ವವೇ ಮೂಲ. ಸ್ತ್ರೀ-ಶೂದ್ರ-ಬ್ರಹ್ಮಬಂಧುಗಳಿಗೆಲ್ಲರಿಗೂ ವೇದಾಧಿಕಾರವಿದ್ದಿ ಲ್ಲವೆಂದು ಹೇಳಿರಲು ವಿಮರ್ಶಕರಿಗೆ ಆ ತತ್ವವನ್ನು ಹಚ್ಚಿ ಬ್ರಹ್ಮಬಂಧು ಗಳಿಗೆ ಈಗ ಹಚ್ಚದಿರುವದು ಪಕ್ಷಪಾತ ಬುದ್ಧಿಯಲ್ಲದೆ ಮತ್ತೇನು ? ಹೀಗೆ ತತ್ವಗಳನ್ನು ಹಚ್ಚುವುದರಲ್ಲಿ ಅನೇಕ ಸಲ ತಪ್ಪುಗಳನ್ನು ಮಾಡಿರ ಬಹುದು, ಅದರಲ್ಲಿ ಅತಿರೇಕವಾಗಿರಬಹುದು. ಆದರೆ ಆ ಮೂಲತತ್ವ ಗಳು ಮಾತ್ರ ಸರ್ವಥಾ ನಿರ್ದೋಷವಾಗಿರುತ್ತವೆಂಬುದನ್ನು ಹೇಳು ವುದೇ ನಮ್ಮ ಮುಖ್ಯ ಉದ್ದೇಶ.

ನಾವು ಗೀತೆಯ ಮತ್ತು ಸನಾತನ ಸಂಸ್ಕೃತಿಯ ತತ್ವಗಳಿಗೂ ಆಧುನಿಕ ಕಾಲದಲ್ಲಿ ಅತ್ಯಂತ ಪ್ರಬಲವಾದ ವಿಚಾರಗಳಾದ ಸ್ವಾತಂತ್ರ್ಯ, ಸಮತೆ ಮತ್ತು ಬಂಧುಭಾವ (Freedom, Equality and Fraternity) ಎಂಬ ತತ್ವಗಳಿಗೂ ಹೋಲಿಸಿ, ಆ ವಿಷಯವಾಗಿ, ಸನಾತನ ಸಂಸ್ಕೃ ತಿಯ ಅಭಿಪ್ರಾಯವೇನಿರುತ್ತದೆಂಬುದನ್ನು ತಿಳಿಸುವೆವು. **ಸ್ವಾತಂತ್ರ್ಯ:**— ಆಧುನಿಕ ಸ್ವಾತಂತ್ರ್ಯದ ಕಲ್ಪನೆಗಿಂತಲೂ, ಸನಾತನ ಧರ್ಮದ ಸ್ವಾತಂ ತ್ರ್ಯದ ಕಲ್ಪನೆಯು ಅತ್ಯಂತ ವ್ಯಾಪಕವಾಗಿರುತ್ತದೆ. ಮೋಕ್ಷದ ಅರ್ಥವೇ ಸಂಪೂರ್ಣಸ್ವಾತಂತ್ರ್ಯವೆಂಬುದು. ಈಗಿನ ಅರ್ಥಮರ್ಥ

ಸ್ವಾತಂತ್ರ್ಯದ ಕಲ್ಪನೆಯನ್ನು ಮಾತ್ರ ಗೀತೆಯು ಎತ್ತಿ ಹಿಡಿಯುವುದಿಲ್ಲ. ಶಾರೀರಿಕ ಮತ್ತು ಮಾನಸಿಕ ಸ್ವಾತಂತ್ರ್ಯಕ್ಕೆ ಸ್ವಾತಂತ್ರ್ಯವೆನ್ನುವುದು ಈಗಿನ ಪರಿಪಾಠ. ಅದು ಸರಿಯಲ್ಲ. ಈಗಿನ ವ್ಯಕ್ತಿಸ್ವಾತಂತ್ರ್ಯದ ಕಲ್ಪನೆಯೆಂದರೆ ವ್ಯಕ್ತಿಗೆ ಬೇಕಾದುದನ್ನು ಮಾಡುವುದಕ್ಕೆ ಅವಕಾಶವಿರಬೇಕೆಂಬುದು. ವ್ಯಕ್ತಿಯಲ್ಲಿ ಬೇಕಾದುದನ್ನು ಮಾಡುವ ಗೂಢಶಕ್ತಿ (Potential power) ಇರುತ್ತದೆಂದೂ ಅದನ್ನು ಯತ್ಕಿಂಚಿತ್ತಾದರೂ ತಡೆಹಿಡಿಯುವುದೆಂದರೆ ವ್ಯಕ್ತಿಸ್ವಾತಂತ್ರ್ಯಕ್ಕೆ ಅಡ್ಡಬರುವುದೆಂದೂ ಜನರು ತಿಳಿಯುತ್ತಾರೆ. ಆದರೆ,ಸನಾತನ ಧರ್ಮವು ಇದನ್ನು ಸಂಪೂರ್ಣವಾಗಿ ಒಪ್ಪುವುದಿಲ್ಲ. ಪ್ರತಿಯೊಬ್ಬ ಜೀವನ ಶಕ್ತಿ ಬೇರೆ, ಸ್ವಭಾವ ಬೇರೆ, ಯೋಗ್ಯತೆ ಬೇರೆ;ಆ ತನ್ನ ವಿಶಿಷ್ಟ ಕ್ಷೇತ್ರದಲ್ಲಿ ವಿಹರಿಸಲು ಮಾತ್ರ ಆತನಿಗೆ ಸ್ವಾತಂತ್ರ್ಯ. ಮಿಕ್ಕವರ ಕ್ಷೇತ್ರದಲ್ಲಿ ಕಾಲಿಡಲು ಆತನಿಗೆ ಅಧಿಕಾರವಿಲ್ಲ. ವ್ಯಕ್ತಿಸ್ವಾತಂತ್ರ್ಯದಂತೆಯೇ ಸಾಮುದಾಯಿಕ ಸ್ವಾತಂತ್ರ್ಯದ ವಿಚಾರ. ಪ್ರತಿಯೊಬ್ಬನ ವ್ಯಕ್ತಿಧರ್ಮದ ವಿಕಾಸಕ್ಕೆ ಅನುವು ಕೊಡುವ ಸಾಮುದಾಯಿಕ ಸ್ವಾತಂತ್ರ್ಯವೇ ಸ್ವಾತಂತ್ರ್ಯ. ವರ್ಣಾಶ್ರಮ ಧರ್ಮದ ಸಮಾಜವು ಮೂಲತಃ ಮೂಲಗುಣಕರ್ಮಗಳ ಮೇಲೆ ವಿಭಾಗಿಸಲ್ಪಟ್ಟಿರುವುದರಿಂದ, ಆ ಸಮಾಜವೇ ಆ ತೆರನಾಗಿ ಅನುವು ಕೊಡುವ ಸಮಾಜವು. ಆದಕಾರಣ, ಕೇವಲ ವೈಶ್ಯಪ್ರಧಾನ (Capitalist)ಸಮಾಜವನ್ನೂ ಅದು ಪುರಸ್ಕರಿಸುವುದಿಲ್ಲ; ಕೇವಲ ಶೂದ್ರಪ್ರಧಾನ (Labour) ಸಮಾಜಕ್ಕೂ ಅದು ಇಂಬುಗೊಡುವುದಿಲ್ಲ. ನಾಲ್ಕೂವರ್ಣಗಳಲ್ಲಿ ಸಮತೂಕವನ್ನಿಡುವ ಸಮಾಜಶಾಸ್ತ್ರವೇ ನಿಜವಾದ ಸಮಾಜ ಶಾಸ್ತ್ರವೆಂದೂ ಮಿಕ್ಕವುಗಳೆಲ್ಲವೂ ಅಪೂರ್ಣವಾದವುಗಳೆಂದೂ ಅದರ ಖಂಡಿತವಾದ ಸಿದ್ಧಾಂತ. ವರ್ಣಾಶ್ರಮಪದ್ಧತಿಯು ಮೂಲತಃ ಸಾತ್ತ್ವಿಕಾದಿ ಗುಣಪೂರ್ವಕವಾದುದು. ಅಂಥ ವರ್ಣಗಳಿಗೆ ಭಾಗವತ ವರ್ಣಗಳೆಂದೂ ಸ್ವಾಭಾವಿಕ ವರ್ಣಗಳೆಂದೂ, ನೈಸರ್ಗಿಕ ವರ್ಣಗಳೆಂದೂ ಹೆಸರುಗಳು. ಯೋನಿಕೃತ ವರ್ಣಗಳು ಅಸ್ವಾಭಾವಿಕ ವರ್ಣಗಳು, ಅನೈಸರ್ಗಿಕ ವರ್ಣಗಳು, ಔಪಾಧಿಕ ವರ್ಣಗಳು, ಆಗಂತುಕ ವರ್ಣಗಳು ಎಂಬುದನ್ನು ಮಾತ್ರ ಶಾಸ್ತ್ರಕಾರರು ಹೇಳಲಿಕ್ಕೆ ಮರೆತಿಲ್ಲ.

ಇರಲಿ. ಈಗಿನ ಸ್ವಾತಂತ್ರ್ಯದ ಕಲ್ಪನೆಗೂ ಆಗಿನ ಸ್ವಾತಂತ್ರ್ಯದ ಕಲ್ಪನೆಗೂ ಈ ಬಗೆಯಾದ ಅಂತರವಿದೆ. ವರ್ಣಾಶ್ರಮವನ್ನು ಕುರಿತು ವಿಚಾರಮಾಡುವಾಗ ಆಚಾರವನ್ನೂ ವರ್ಣಾಶ್ರಮತತ್ವವನ್ನೂ ಒಂದುಗೂಡಿಸಿ ಟೀಕಿಸುವುದು ತಪ್ಪು. ಆಚಾರಶಾಸ್ತ್ರವು ಪರಿಸ್ಥಿತಿಯನ್ನವಲಂಬಿಸುವ ಶಾಸ್ತ್ರವು. ವರ್ಣಾಶ್ರಮವು ಸನಾತನ ತತ್ವವು.

ಈಗ ಸಮಾಜದಲ್ಲಿ, ಅನೇಕ ತರಹದ ಹೊಸ ತತ್ವಗಳು ಪ್ರಚಾರದಲ್ಲಿ ಬರತೊಡಗಿವೆ. ವರ್ಣಾಶ್ರಮದ ಶುದ್ಧಸ್ವರೂಪವು ಹೋಗಿ, ಅದಕ್ಕೆ ಮಿಶ್ರಸ್ವರೂಪವು ಪ್ರಾಪ್ತವಾದಾಗ, ಹೀಗೆ ಆಗುವುದು ಸಹಜ. ಆದರೆ, ದೂರದೃಷ್ಟಿಯುಳ್ಳವರು ಮೇಲೆ ಮೇಲಷ್ಟೇ ನೋಡದೆ, ಬಹಳ ಆಳವಾಗಿ ವಿಚಾರಮಾಡಬೇಕು. ಸಮಾಜಶಾಸ್ತ್ರವು ಗೂಢವಾದ ಶಾಸ್ತ್ರವು. ವೇದಾಂತ ಶಾಸ್ತ್ರದ ತರುವಾಯದಲ್ಲಿ ಅತ್ಯಂತ ತೊಡಕುಳ್ಳ ಶಾಸ್ತ್ರವೆಂದರೆ ಅದೇ. ಹೊಸ ಪದ್ಧತಿಗಳ ಗುಣಾವಗುಣಗಳು ಸಮಾಜದಲ್ಲಿ ಒಡಮೂಡುವುದಕ್ಕೆ ಎಷ್ಟೋ ತಲೆಗಳು ಹೋಗಬೇಕಾಗುತ್ತವೆ. ಆದಕಾರಣ, ಇಂದು, ಆ ಪದ್ಧತಿಗಳ ದೋಷಗಳನ್ನು ಸಿದ್ಧಮಾಡಿ ತೋರಿಸುವುದು ಶಕ್ಯವಿರುವುದಿಲ್ಲ. ಇತ್ತ, ಪ್ರಚಲಿತ ಪದ್ಧತಿಯ ದೋಷಗಳು ಮಾತ್ರ ತಟ್ಟನೆ ಎದ್ದು ಕಾಣುತ್ತವೆ. ಆದಕಾರಣ, ಸಮಾಜಸುಧಾರಕರು ಈ ವಿಷಯದಲ್ಲಿ ಬಹಳ ಎಚ್ಚರಿಕೆಯಿಂದ ಒಂದೊಂದೇ ಹೆಜ್ಜೆಯನ್ನು ಇಡಬೇಕಾಗುತ್ತದೆ. ಪ್ರಯೋಗಾತ್ಮಕ ಕ್ಷೇತ್ರಗಳಲ್ಲಿ ಹೊಸ ತತ್ವಗಳನ್ನು ಪರಿಶೋಧಿಸಿ ಪರೀಕ್ಷಿಸಲು ಅಡ್ಡಿ ಇಲ್ಲ. ಆದರೆ, ಅವು ಸಿದ್ಧಿತ ತತ್ವಗಳೆಂದು ಇಡೀ ಸಮಾಜದ ಮೇಲೆ ಅವುಗಳನ್ನು ಜುಲುಮೆಯಿಂದ ಹೇರುವುದು ಅನ್ಯಾಯವು. ಇರಲಿ; ಜಗತ್ತು ಎಷ್ಟೋ ತರಹದ ಪದ್ಧತಿಗಳನ್ನು ಪ್ರಯೋಗಿಸಿ ನೋಡಿದರೂ ಕೊನೆಗೆ, ಒಟ್ಟಿನ ಮೇಲೆ, ಪ್ರತ್ಯಕ್ಷ ವರ್ಣಾಶ್ರಮದ ಮೇಲಾಗಲಿ ಅಥವಾ ವರ್ಣಾಶ್ರಮಕ್ಕೆ ಮೂಲಭೂತವಾದ ತತ್ವಗಳ ಮೇಲಾಗಲಿ ವಿಭಾಗಿಸಲ್ಪಟ್ಟ ಸಮಾಜವೇ ಹೆಚ್ಚು ಸುರಕ್ಷಿತವಾದುದೂ ಸುಸ್ಥಿರವಾದುದೂ ಎಂಬುದು ಸಿದ್ಧವಾಗದೆ ಇರದು ಎಂದು ನಮಗೆ ದೃಢವಿಶ್ವಾಸವಿದೆ. ಸ್ವಧರ್ಮಕ್ಕೂ ಸಮಾಜಧರ್ಮಕ್ಕೂ ತಳಕು ಹಾಕುವ ಪದ್ಧತಿಯು ಅದು. ತೀರ ಸಂಕು

ಚಿತವಾದ ವ್ಯಷ್ಟಿಧರ್ಮಕ್ಕೂ ಮಿತಿಮೀರಿ ವ್ಯಾಪಕವಾದ ಸರ್ವ ಭೂತಹಿತಧರ್ಮಕ್ಕೂ ನಡುವಿರುವ ಸಮಷ್ಟಿಧರ್ಮವನ್ನು ಎತ್ತಿ ಹಿಡಿ ಯುವುದು ವರ್ಣಾಶ್ರಮಧರ್ಮವು.

ಇನ್ನು ಇಚ್ಛಾಸ್ವಾತಂತ್ರ್ಯದ (Freedom of will) ವಿಚಾರ. ಜೀವನಿಗೆ ಸಂಪೂರ್ಣವಾದ ಇಚ್ಛಾಸ್ವಾತಂತ್ರ್ಯವಿರುತ್ತದೆಂದೂ ಸನಾತನ ಧರ್ಮವು ಅನ್ನುವುದಿಲ್ಲ. ಅಥವಾ ಆತನು ಕಲ್ಲಿನಂತೆ, ಸಂಪೂರ್ಣವಾಗಿ ಜಡನಾಗಿರುವನೆಂದೂ ಅದು ಅನ್ನುವುದಿಲ್ಲ. ಜೀವನಿಗೆ ಕೆಲವೊಂದು ಮರ್ಯಾದಿತವಾದ ಕ್ಷೇತ್ರದಲ್ಲಿ ಮಾತ್ರ ಇಚ್ಛಾಸ್ವಾತಂತ್ರ್ಯವಿರುತ್ತದೆಂದು ಅದರ ತತ್ವ. ಒಂದು ಕರ್ಮವುಂಟಾಗುವುದಕ್ಕೆ ಮನುಷ್ಯನ ಇಚ್ಛೆಯೊಂದೇ ಒಂದು ಕಾರಣವಾಗಿದ್ದರೆ, ಆತನಿಗೆ ಸಂಪೂರ್ಣವಾದ ಇಚ್ಛಾ ಸ್ವಾತಂತ್ರ್ಯವು ಇರುತ್ತದೆಂದು ಹೇಳಬಹುದಾಗಿತ್ತು. ನಿಜವಾಗಿ ಹಾಗಿರುವುದಿಲ್ಲ. ಒಂದು ಕಾರ್ಯವುಂಟಾಗಬೇಕಾದರೆ ಐದು ಕಾರಣಗಳು ಮಿಲಿತವಾಗಿರಬೇಕೆಂದು ಗೀತೆಯು ಹೇಳುತ್ತದೆ (೧೮.೧೩). ಅವು ಯಾವುವೆಂದರೆ (೧) ಅಧಿಷ್ಠಾನ (೨) ಕರ್ತ (೩) ಕರಣ (೪) ಕ್ರಿಯೆಗಳು (೫) ಮತ್ತು ದೈವ ಸಾರಾಂಶ, ಕರ್ತನು, ಈ ಐದು ಕಾರಣಗಳಲ್ಲಿ ಒಬ್ಬ ಕಾರಣನು. ಆದಕಾರಣ, ಆತನಿಗೆ ೧/೫ ಇಚ್ಛಾಸ್ವಾತಂತ್ರ್ಯವು ಮಾತ್ರವೇ ಇರುತ್ತದೆಂದು ಹೇಳಬಹುದು. ಆತನು ಕೇವಲ ಕಲ್ಲಿನಂತೆ ಇಚ್ಛಾಸ್ವಾತಂತ್ರ್ಯ ರಹಿತನಾಗಿದ್ದರೆ, ಆತನಿಗೆ ವಿಧಿನಿಷೇಧಗಳೇ ಕೂಡು ತಿದ್ದಿಲ್ಲ. ಒಟ್ಟಿಗೆ ಹೇಳುವುದೇನೆಂದರೆ, ಜೀವನಿಗೆ ಕ್ರಿಯೆಗಳನ್ನು ಮಾಡು ವುದಕ್ಕೆ ಮರ್ಯಾದಿತವಾದ ಇಚ್ಛಾಸ್ವಾತಂತ್ರ್ಯವಿರುತ್ತದೆ, ಅದಕ್ಕೆ ನಮ್ಮವರು ದತ್ತಸ್ವಾತಂತ್ರ್ಯವೆನ್ನುತ್ತಾರೆ. ದತ್ತಸ್ವಾತಂತ್ರ್ಯವೆಂದರೆ, ಜೀವನಿಗೆ ಕೆಲವು ಮಟ್ಟಿಗೆ ಇಚ್ಛೆಯನ್ನು ಸ್ವತಂತ್ರವಾಗಿ ಉಪಯೋಗಿ ಸುವ ಶಕ್ತಿಯು ದೇವರಿಂದ ದತ್ತವಾಗಿರುತ್ತದೆ, ಅಂದರೆ ಕೊಡಲ್ಪಟ್ಟಿರು ತ್ತದೆ. ಇಲ್ಲಿ ಒಂದು ಆಕ್ಷೇಪವು ಹೊರಡುವ ಸಂಭವವುಂಟು. ಅದೇ ನೆಂದರೆ, ಹೀಗೆ ಸ್ವಾತಂತ್ರ್ಯವು ಮರ್ಯಾದಿತವಾಗಿದ್ದ ಬಳಿಕ, ಜೀವನಿಗೆ ವಿಧಿನಿಷೇಧಗಳು ಹೇಗೆ ಕೂಡುತ್ತವೆಂಬುದು ಮತ್ತು ಆ ಬಳಿಕ ಜಗ ತ್ತಿನ ಕ್ರಿಯೆಗಳಿಗೆ ಆಸ್ಪದವೆಲ್ಲಿ ಎಂಬುದು. ಅದಕ್ಕೆ ನಮ್ಮ ಉತ್ತರವೇ

ನೆಂದರೆ, ಜೀವನಿಗೆ ಕೊಟ್ಟಿರುವ ಕ್ಷೇತ್ರದಲ್ಲಿ ಆತನನ್ನು ಹೊಣೆಗಾರ ನನ್ನಾಗಿ ಹಿಡಿಯಲಿಕ್ಕೆ ಏನೂ ಅಡ್ಡಿ ಇಲ್ಲ. ಮತ್ತು ಆತನ ಈ ಸಂಕು ಚಿತ ಕ್ಷೇತ್ರದಲ್ಲಿಯ ವ್ಯಾಪಾರಗಳೇ ಜಗತ್ತಿನ ಕ್ರಿಯೆಗಳನ್ನು ಸಾಗಿಸ ಬಲ್ಲವು. ಇದಕ್ಕೆ ಗಡಿಯಾಳದ ಮತ್ತು ಇಂಜನಿನ ಉಪಮೆಗಳನ್ನು ಕೊಡಬಹುದು. ಗಡಿಯಾಳದ ಗೋಲಕಕ್ಕೆ ವಿಶಿಷ್ಟ ಕ್ಷೇತ್ರದಲ್ಲಿಯೇ ಅಲ್ಲಾಡುವ ಶಕ್ತಿಯಿದ್ದರೂ ಅದು ಕಾಲ ವ್ಯವಹಾರವೆಲ್ಲವನ್ನೂ ಸಾಗಿ ಸುವದಿಲ್ಲವೆ? ಹಾಗೆಯೇ ಜೀವನಿಗೆ ಸಂಕುಚಿತವಾದ ಸ್ವಾತಂತ್ರ್ಯ ವಿದ್ದರೂ ಆತನು ಲೋಕ ವ್ಯವಹಾರವೆಲ್ಲವನ್ನೂ ಸಾಗಿಸಬಲ್ಲನು. ಇಷ್ಟೇ ಅಲ್ಲ, ವಿಧಿನಿಷೇಧಗಳು ಸಂಕುಚಿತಸ್ವಾತಂತ್ರ್ಯವುಳ್ಳವರಿಗೇ ಅನ್ವಯಿ ಸುತ್ತವಲ್ಲದೆ, ಸಂಪೂರ್ಣಸ್ವಾತಂತ್ರ್ಯವಿದ್ದವರಿಗೂ ವಿಧಿನಿಷೇಧಗಳು ಹತ್ತುವುದಿಲ್ಲ, ಪೂರ್ಣಪರತಂತ್ರವುಳ್ಳವರಿಗೂ ಅವು ಹತ್ತುವುದಿಲ್ಲ. ಇಂಜ ನಿನ ಉದಾಹರಣೆಯಿಂದಲೂ ಇಚ್ಛಾಸ್ವಾತಂತ್ರ್ಯದ ಮರ್ಮವನ್ನು ತಿಳಿಸಿ ಹೇಳಬಹುದು. ಇಂಜನಿನಲ್ಲಿರುವ ಉಗಿಯಿಂದ ಹಿಂದುಮುಂದಕ್ಕೆ ಸರಿದಾಡುವ ಕಬ್ಬಿಣದ ಸಲಾಕೆಯು ವಿಶಿಷ್ಟ ಕ್ಷೇತ್ರದಲ್ಲಿ ಸಂಚರಿಸುತ್ತಿ ದ್ದರೂ, ಅದರ ಆ ಚಲನವಲನಗಳು ಇಡೀ ಉಗಿಬಂಡೆಯನ್ನು ಎಳೆದೊ ಯ್ಯುವುದಕ್ಕೆ ಸಮರ್ಥವಾಗುವವು. ಹಾಗೆಯೇ ಜೀವನ ಮರ್ಯಾದಿತ ಇಚ್ಛಾಸ್ವಾತಂತ್ರ್ಯವು ಲೋಕವ್ಯವಹಾರವೆಲ್ಲವನ್ನೂ ನಡಿಸಬಲ್ಲದು. ಇದು ನಮ್ಮ ಇಚ್ಛಾ ಸ್ವಾತಂತ್ರ್ಯದ ಸಿದ್ಧಾಂತ.

**ಸಮತೆ:**—ಗೀತೆಯು ಸಮತೆಯನ್ನೂ ಸಾರುತ್ತದೆ. ಆದರೆ ಅದರ ಸಮತೆಯ ಕಲ್ಪನೆಗೂ ಈಗಿನ ಅದರ ಕಲ್ಪನೆಗೂ ಭೇದವಿದೆ. ಎಲ್ಲರೂ ಸಮಾನರು ಎಂಬುದರ ಅರ್ಥವು ಅವರು ಸರ್ವಕಾಲದಲ್ಲಿಯೂ ಸರ್ವವಿಷಯದಲ್ಲಿಯೂ ಸರ್ವರೀತಿಯಲ್ಲಿಯೂ ಸರ್ವಪರಿಸ್ಥಿತಿಯ ಲ್ಲಿಯೂ ಸಮಾನರಿರುತ್ತಾರೆಂಬುದು ಈಗಿನ ಸಾಮಾನ್ಯಕಲ್ಪನೆಯು. ಈ ತರಹದ ಕಲ್ಪನೆಯು ಸನಾತನ ಸಂಸ್ಕೃತಿಗೆ ಮಾನ್ಯವಿಲ್ಲ. ಅವರವರ ಯೋಗ್ಯತೆಗೆ ತಕ್ಕಂತೆ ಅವರನ್ನು ಸಮಾನವಾಗಿ ಭಾವಿಸುವು ದಕ್ಕಷ್ಟೇ ಗೀತೆಯು ಹೇಳುತ್ತದೆ. ಸಮತೆಯ ತತ್ವವನ್ನು ನಾವು

ಗೀತೆಯು ಕೆಳಗೆ ಕಾಣಿಸಿದ ಶ್ಲೋಕಗಳಲ್ಲಿ ಕಾಣಬಹುದು.* ಗೀತೆಯು ಅಥವಾ ಸನಾತನಧರ್ಮವು ಪುರಸ್ಕರಿಸುವ ಸಮತೆಯು ತತ್ವವು ಕರುಣಾಪೂರ್ಣನಾದ ನ್ಯಾಯಾಧೀಶನ ಸಮತೆಯ ತತ್ವವು. ಸರ್ವರೂ ಸಮಾನರೆಂದರೆ ಅವರ ಶರೀರಗಳೆಲ್ಲವೂ ಸಮಾನವೆಂದು ಗೀತೆಯ ಅಭಿಪ್ರಾಯವಲ್ಲ. ಶರೀರವು ಪೂರ್ವಕರ್ಮಾಧೀನವು. ಎಲ್ಲರ ಶರೀರಗಳಲ್ಲಿ ಒಬ್ಬ ಪರಮಾತ್ಮನೇ ತುಂಬಿರುತ್ತಾನೆಂದು ಭಾವಿಸುವುದು ಸಮತ್ವವು. ತನ್ನಂತೆ ಪರರ ಬಗೆಯುವುದು ಸಮತ್ವವು. ಆಯಾ ಜೀವರುಗಳ ಉನ್ನತಿಮಾರ್ಗದಲ್ಲಿ ಅಡ್ಡ ಬರದಿರುವುದು ಸಮತ್ವವು. ಇರಲಿ.

**ಬಂಧುಭಾವ:**—ಬಂಧುಭಾವದ ವಿಷಯದಲ್ಲಿ ನಮ್ಮ ಕಲ್ಪನೆಯು ಆಧುನಿಕ ಕಲ್ಪನೆಗಿಂತ ಅತ್ಯಂತ ವ್ಯಾಪಕವಾಗಿದೆ. ಬಂಧುಭಾವದ ಕ್ಷೇತ್ರವನ್ನು ಈಗಿನವರು ಮಾನವ ಜಾತಿಗೆ ಮಾತ್ರವೇ ಹಚ್ಚುತ್ತಾರೆ. ನಮ್ಮವರಾದರೋ, ಅದರಲ್ಲಿ ಸರ್ವಭೂತಹಿತವನ್ನೂ ಸಮಾವೇಶ ಮಾಡುತ್ತಾರೆ. ಆದರೆ, ಕಲ್ಪನೆಯಲ್ಲಿ ಮಾತ್ರ ಬಹಳ ಭೇದವಿದೆ. ಬಂಧುಭಾವವೆಂದರೆ ಒಬ್ಬರನ್ನೊಬ್ಬರು ಅಪ್ಪಿಕೊಳ್ಳುವದು, ವರ್ಣಸಂಕರ ಮಾಡುವುದು, ಸಹಭೋಜನ ಮಾಡುವುದು ಎಂದು ಈಗಿನ ಸಾಮಾನ್ಯ ಕಲ್ಪನೆ. ಇದನ್ನು ಸನಾತನಸಂಸ್ಕೃತಿಯು ಒಪ್ಪುವುದಿಲ್ಲ. ಇವೆಲ್ಲವೂ ಗೌಣ ವಿಷಯಗಳೆಂದೂ ಮನಸ್ಸಿನ ಸಮಭಾವವೇ ನಿಜವಾದ ಬಂಧುಭಾವವೆಂದೂ ಸನಾತನಧರ್ಮದ ಕಲ್ಪನೆ. ಅದಕ್ಕೆ ಸಹಭೋಜನಾದಿಗಳು ಸಹಕಾರಿಯಾಗಬಹುದು, ಅಥವಾ ಆಗಲಿಕ್ಕಿಲ್ಲ. ಸಹಭೋಜನವನ್ನಷ್ಟೇ ಏಕೆ, ಮುಸಲ್ಮಾನರಂತೆ ಏಕಪಾತ್ರ ಭೋಜನವನ್ನೂ ಮಾಡಬಹುದು. ಉಚ್ಚಿಷ್ಟಭೋಜನವೂ ಯಜ್ಞಶಿಷ್ಟಾಶನವೂ ಕೂಡ ನಮ್ಮಲ್ಲಿ ಹೇಳಲ್ಪಟ್ಟಿವೆ. ಆದರೆ ಅವೆಲ್ಲಕ್ಕೂ ತಾರತಮ್ಯವಿದೆ, ಅವೆಲ್ಲವೂ ಮರ್ಯಾದಿತ ಕ್ಷೇತ್ರದಲ್ಲಿ. ಹೆಂಡತಿಗಾಗಿ ಹೇಳಿದ ಧರ್ಮಗಳಲ್ಲಿಯೂ ಕೆಲವು ಪಂಥಗಳಲ್ಲಿ ಕಂಡು ಬರುವ ಗುರುಪ್ರಸಾದ ಮುಂತಾದವುಗಳಲ್ಲಿಯೂ ಕೆಲವು ಆಚಾರಗಳಲ್ಲಿಯೂ ನಾವು ಆ ತತ್ವಗಳನ್ನು ಕಾಣಬಹುದು. ನಮ್ಮಲ್ಲಿ,

* ಸಮತೆಯ ಬಗ್ಗೆ ಶ್ಲೋಕಗಳು— ೨.೧೮; ೨.೧೯; ೫,೮; ೬,೯; ೬.೨೯; ೬.೬೦; ೬,೩೨; ೯,೨೯; ೯.೩೦; ೯.೩೧; ೯.೩೨; ೯.೩೩,

ಆತ್ಮಗಳ ಬೆರಿಕೆಯ ಪ್ರಮಾಣದಲ್ಲಿ ಊಟಉಡಿಗೆಗಳ ಬೆರಿಕೆ. ಮನಸ್ಸಿನ ಮತ್ತು ಸಂಸ್ಕೃತಿಯ ಮೇಲಿಂದ ಊಟಉಡಿಗೆ ಮತ್ತು ರಕ್ತಸಂಬಂಧದ ತಾರತಮ್ಯ. ಹಾಗೆ ಮಾಡುವದಕ್ಕೆ ವರ್ಣಾಶ್ರಮಗಳು ಅನಿವಾರ್ಯವಾದ ಹೆಗ್ಗುರುತುಗಳು ಮಾತ್ರ. ಶಾಸನಭಂಗವು ಸಾಮಾನ್ಯ ಜನರ ಸಾಮಾನ್ಯ ಪ್ರವೃತ್ತಿಯಾಗಬಾರದು ಮತ್ತು ಆಚಾರಗಳನ್ನು ಬದಲಿಸುವುದಕ್ಕೂ ಶಾಸನಭಂಗವನ್ನು ಮಾಡಿಸುವುದಕ್ಕೂ ಬೇರೆ ಬೇರೆ ಅಧಿಕಾರಿಕ ಸಂಸ್ಥೆಗಳು ಇರಬೇಕು. ಸಾರಾಂಶ, ಮೊದಲು ಸಾಂಸ್ಕೃತಿಕ ಸಮಾನತೆ ಆಮೇಲೆ ಬೆರಿಕೆಯಲ್ಲದೆ, ಮೊದಲು ಬೆರಿಕೆ ಆಮೇಲೆ ಸಾಂಸ್ಕೃತಿಕ ಸಮಾನತೆಯೆಂಬುದಾಗಿ, ಕುದುರೆಯ ಮುಂದೆ ಗಾಡಿಯನ್ನು ಹೂಡುವ ತತ್ವವು ಸನಾತನಸಂಸ್ಕೃತಿಗೆ ಮಾನ್ಯವಿಲ್ಲ. ಅಲ್ಲದೆ, ಬಂಧುಭಾವಕ್ಕಿಂತ ಆತ್ಮೋನ್ನತಿಯು ಹೆಚ್ಚಿನದು. ಆತ್ಮನಾಶವನ್ನು ಎಂದೆಂದಿಗೂ ಮಾಡಿಕೊಳ್ಳಕೂಡದು (೬.೫). ಇರಲಿ.

ಗೀತೆಯ ಮತ್ತು ಸನಾತನಸಂಸ್ಕತಿಯ ಮತ್ತೊಂದು ವೈಶಿಷ್ಟ್ಯವನ್ನು ಉಲ್ಲೇಖಿಸಿ ನಾವು ಈ ಪ್ರಕರಣವನ್ನು ಮುಗಿಸುವೆವು. ಅದಾವುದೆಂದರೆ ಮೋಕ್ಷಕ್ಕೂ ಶಾಶ್ವತ ನೀತಿಗೂ ಸಂಬಂಧ.ಅಂಥ ನೀತಿವಂತನೇ ಮೋಕ್ಷವನ್ನು ಪಡೆಯಬಲ್ಲನಲ್ಲದೆ ಅನೀತಿವಂತನು ಅದನ್ನು ಎಂದಿಗೂ ಪಡೆಯಲಾರನೆಂಬ ತತ್ವವು ನಮ್ಮ ಧರ್ಮದಲ್ಲಿ ಎಷ್ಟು ಬಲವಾಗಿ ಎತ್ತಿ ಹಿಡಿಯಲ್ಪಟ್ಟಿರುವುದೋ ಅಷ್ಟು ಬಲವಾಗಿ ಮತ್ತಾವ ಶಾಸ್ತ್ರದಲ್ಲಿಯೂ ಅದು ಪುರಸ್ಕರಿಸಲ್ಪಟ್ಟಿರುವುದಿಲ್ಲ. ಗೀತೆಯನ್ನೋದಿದವರಿಗೆ ಗೀತೆಯು ಇಂದ್ರಿಯ ಜಯ, ಅಹಂಕಾರಜಯ, ಸಮದುಃಖಸುಖತ್ವ ಮುಂತಾದವುಗಳಿಗೆ ಎಷ್ಟು ಮಹತ್ವವನ್ನು ಕೊಟ್ಟಿರುತ್ತದೆಂಬುದು ಕ್ಷಣಕ್ಷಣಕ್ಕೆ ಗೊತ್ತಾಗುವುದು. ಈಗಿನ ರಾಜಕಾರಣದಲ್ಲಿ ನೀತಿಗೂ ಧ್ಯೇಯಕ್ಕೂ ಸಂಬಂಧವನ್ನೇ ಇಡುವದಿಲ್ಲ. ಎಷ್ಟೇ ಅನೀತಿವಂತನಾಗಿದ್ದರೂ ಆತನಿಗೆ ರಾಜಕಾರಣದಲ್ಲಿ ಬಹುಮಾನ. ಇದು ಸನಾತನ ಸಂಸ್ಕೃತಿಗೆ ಎಂದಿಗೂ ಸರಿಬಾರದ ಮಾತು. ಹಳೆಯ ಜನರು ಧರ್ಮಕ್ಕೂ ವ್ಯವಹಾರಕ್ಕೂ ಸಂಬಂಧವಿಡದೆ ಒಂದು ರೀತಿಯಿಂದ ಸನಾತನಧರ್ಮದ ಅಪಮಾನವನ್ನು ಮಾಡುತ್ತಿದ್ದರೆ ಹೊಸ ಜನರು ಹೀಗೆ ಮತ್ತೊಂದು ರೀತಿಯಲ್ಲಿ ಅದರ

ಅಪಮಾನಪನ್ನು ಮಾಡುತ್ತಿರುವರು. ಇಬ್ಬರೂ ಸನಾತನಸಂಸ್ಕೃತಿಯ ದೃಷ್ಟಿಯಿಂದ ನಿಂದ್ಯರೇ.

ಒಟ್ಟಿಗೆ ಹೇಳುವದೇನೆಂದರೆ, ಗೀತೆಯಲ್ಲಿ ಸನಾತನ ತತ್ವಗಳು ತುಂಬಿವೆ, ಈ ಸನಾತನ ಸಂಸ್ಕೃತಿಯ ತತ್ವಗಳ ಮರ್ಮವನ್ನು ಆಕಲನ ಮಾಡದಿರುವುದರಿಂದಲೇ ಅನೇಕ ನಿರರ್ಥಕ ವಾದಗಳು ಉದ್ಭವಿಸಿವೆ. ಈ ತತ್ವಗಳನ್ನು ಒಪ್ಪದವರು ಸನಾತನಿಗಳಲ್ಲ. ಈ ಮೂಲತತ್ವಗಳನ್ನು ಒಪ್ಪಿ ಅವುಗಳನ್ನು ಕಾಲಕ್ಕನುಸಾರವಾಗಿ ಅನ್ವಯಿಸುವುದರಲ್ಲಿ ಮತ ಭೇದವಾದರೆ ಅಡ್ಡಿ ಇಲ್ಲ. ಹಾಗಿಲ್ಲದೆ, ತನಗೆ ಸನಾತನ ಧರ್ಮದ ತತ್ವ ಗಳ ನಿಜವಾದ ರಹಸ್ಯವು ಗೊತ್ತಾಗದಿದ್ದ ಮೂಲಕ ಪ್ರಾಚೀನ ಋಷಿ ಗಳಿಗೆ ಹೆಸರನ್ನಿಡುವವರು ಘೋರಪಾತಕಿಗಳು. ಕೆಲವು ಪಂಥಗಳಲ್ಲಿ ವ್ಯಕ್ತಿಗೆ ವಿಶೇಷ ಮಹತ್ವವು ಕೊಡಲ್ಪಡುತ್ತದೆ. ಮತ್ತೆ ಕೆಲವು ಜನಾಂಗ ಗಳಲ್ಲಿ ಸಮಾಜಕ್ಕೇನೇ ಸರ್ವಸ್ವೀ ಮಹತ್ವವು ಕೊಡಲ್ಪಡುತ್ತದೆ. ಆದರೆ ಗೀತೆಯಲ್ಲಿ ವ್ಯಕ್ತಿಯನ್ನು ಯಾವವಿಧದಿಂದಲೂ ತೇಜೋಹೀನನನ್ನಾಗಿ ಮಾಡದೆ, ಸಮಾಜದ ಸ್ವಾಸ್ಥ್ಯವನ್ನು ಸಾಧಿಸುವ ಕಲೆಯು ಅಥವಾ ಯುಕ್ತಿಯು ವರ್ಣಿತವಾಗಿದೆ. ಕೆಲವು ಜನಾಂಗಗಳಲ್ಲಿ ಇಹಲೋಕಕ್ಕೆ ಮಾತ್ರವೇ ಮಹತ್ವವು ಕೊಡಲ್ಪಡುತ್ತದೆ, ಮತ್ತೆ ಕೆಲವುಗಳಲ್ಲಿ ಪರ ಲೋಕಕ್ಕೇ ಗೌರವವು ಕೊಡಲ್ಪಡುತ್ತದೆ. ಆದರೆ, ಸನಾತನ ಧರ್ಮ ದಲ್ಲಿಯಾದರೋ ಇಹಲೋಕದ ಮಹತ್ವವನ್ನು ಕಡಿಮೆಮಾಡದೆ, ಸ್ವರ್ಗಾದಿಪರಲೋಕಗಳ ಮಹತ್ವವನ್ನು ಮಿತಿಮೀರಿ ಬೆಳಸದೆ, ಅವೆಲ್ಲವು ಗಳ ಆಚೆಗಿರುವ,ಆದರೂ ಅವೆಲ್ಲವುಗಳಿಗೂ ಅವಿರುದ್ಧವಾಗಿರುವ-ಮೋಕ್ಷ ಸುಖವನ್ನು ಸಾಧಿಸುವ ಯೋಗವು ಹೇಳಲ್ಪಟ್ಟಿದೆ.

ಆದಕಾರಣ, ಗೀತೆಯನ್ನು ಆಳವಾಗಿ ಅಭ್ಯಾಸಮಾಡಿದರೆ ನಮ್ಮ ಜನರ ಮನಸಿನಲ್ಲಿ ಈಗ ಬೇರೂರಿರುವ ಅನೇಕ ತಪ್ಪುತಿಳವಳಿಕೆಗಳು ತಾವಾಗಿಯೇ ಮಾಯವಾಗುವವೆಂದು ಧಾರಾಳವಾಗಿ ಹೇಳಬಹುದು.

---

## ೧೫ ನೆಯ ಪ್ರಕರಣ

# ಗೀತೆಯ ಸಮತೂಕವು

ಹಿಂದಿನ ಪ್ರಕರಣದಲ್ಲಿ, ಗೀತೆಯ ಸನಾತನಸಂಸ್ಕೃತಿಯ ತತ್ತ್ವಗಳನ್ನು ಹೇಳಿದೆವಷ್ಟೇ. ಇನ್ನು, ಈ ಪ್ರಕರಣದಲ್ಲಿ ಗೀತಾಸಂದೇಶಕ್ಕೆ ಸಂಬಂಧಿಸಿರುವ ಮತ್ತೊಂದು ವಿಶೇಷ ತತ್ತ್ವವನ್ನು ಕುರಿತು ವಿವೇಚಿಸುವೆವು. ಅದಾವುದೆಂದರೆ ಗೀತೆಯ ಸಮತೂಕವು.

ಸಮತೂಕವೇ ಗೀತೆಯ ಸಂದೇಶವು. ಗೀತೆಯಲ್ಲಿ ಅನೇಕ ಧಾರ್ಮಿಕ, ಸಾಮಾಜಿಕ, ನೈತಿಕ ಮುಂತಾದ ಸಿದ್ಧಾಂತಗಳು ಅಡಕವಾಗಿರುವವಷ್ಟೆ. ಅವೆಲ್ಲವನ್ನೂ ಸೂಕ್ಷ್ಮವಾಗಿ ಅಭ್ಯಾಸ ಮಾಡಿದರೆ, ನಮಗೆ ಕಂಡು ಬರುವುದೇನೆಂದರೆ, ಗೀತೆಯು ಪ್ರತಿಯೊಂದು ವಿಷಯದಲ್ಲಿ ತಕ್ಕಡಿಯನ್ನು ಸಮತೂಕವನ್ನಾಗಿ ಹಿಡಿಯಲು ಪ್ರಯತ್ನಿಸುತ್ತದೆ. ಇದನ್ನೇ ಬೇರೆ ರೀತಿಯಲ್ಲಿ ಹೇಳುವುದಾದಲ್ಲಿ, ಗೀತೆಯು ಎರಡು ತುಟ್ಟತುದಿಗಳ ನಡುವಿನ ಮಧ್ಯಬಿಂದುವು. ಅರಿಸ್ಟಾಟಲ್‌ನೆಂಬ ಪಾಶ್ಚಿಮಾತ್ಯ ತತ್ತ್ವಜ್ಞನು ತನ್ನ ನೈತಿಕ ಸಿದ್ಧಾಂತದ ಗ್ರಂಥದಲ್ಲಿ, ನೀತಿಯೆಂದರೆ ಎರಡು ದುರ್ಗುಣಗಳ ನಡುವಿನ ಸದ್ಗುಣವು ಎಂದು ಹೇಳಿ, ಅದಕ್ಕೆ ಸುವರ್ಣ ಮಧ್ಯವು ಎಂದು ಹೆಸರಿಟ್ಟಿದ್ದಾನೆ. ಮತ್ತು ಆತನು ಧೈರ್ಯ, ದಾನ ಮುಂತಾದ ಅನೇಕ ಸದ್ಗುಣಗಳನ್ನು ತೆಗೆದುಕೊಂಡು, ಅವೆಲ್ಲವೂ ಆಯಾ ಜಾತಿಯ ಎರಡು ದುರ್ಗುಣಗಳ ನಡುವಿನ ಮಾರ್ಗವು ಹೇಗೆ ಎಂಬುದನ್ನು ತೋರಿಸಿರುವನು. ಉದಾ:— ಧೈರ್ಯವೆಂಬುದು ಅಂಜುಬುರಕತನ ಮತ್ತು ಮಿತಿಮೀರಿದ ಧುಮುಕುತನ ಇವುಗಳನ್ನು ಬಿಟ್ಟು ಮಿತಿಯಿಂದ ಧೈರ್ಯವನ್ನು ತೋರಿಸುವ ಗುಣವು. ಹೀಗೆಯೇ, ಪ್ರತಿಯೊಂದು ಸದ್ಗುಣವು ಅತಿ ಮತ್ತು ನೀತಿ ಇವುಗಳ ನಡುವಿನ ಮಿತಿ ಮಾರ್ಗವು, ಅದೇ ನಿಜವಾದ ಸದ್ಗುಣವು ಎಂದೆನ್ನುತ್ತಾನೆ. ನಾವು ತುಸು ಹೆಚ್ಚು ಕಡಿಮೆಯಾಗಿ, ಅದೇ ಪದ್ಧತಿಯನ್ನವಲಂಬಿಸಿ, ಕೆಲವು

ವಿಷಯುಗಳಲ್ಲಿ ಗೀತೆಯು ಕೂಡ, ಅದೇ ಧೋರಣವನ್ನು ಹೇಗೆ ಎತ್ತಿ ಹಿಡಿದಿದೆಂಬುದನ್ನು ತೋರಿಸುತ್ತೇವೆ.

ನಾವು ಆ ಮಿತಿತತ್ವವನ್ನು ಗೀತೆಯು ಕೆಳಗೆ ಕಾಣಿಸಿದ ಸಿದ್ಧಾಂತಗಳಲ್ಲಿ ಕಾಣಬಹುದು.

(೧) **ಯೋಗವೆಂಬುದು ಭೋಗತ್ಯಾಗಗಳ ನಡುವಿನ ಮಧ್ಯಬಿಂದುವು.** ಒಂದು ಕೇವಲ ಭೋಗಪಕ್ಷ, ಮತ್ತೊಂದು ಕೇವಲ ತ್ಯಾಗಪಕ್ಷ. ಭೋಗಪಕ್ಷವು ಎನ್ನುವುದೇನೆಂದರೆ, ಐಹಿಕ ಮತ್ತು ಪಾರಲೌಕಿಕ ಸುಖಗಳನ್ನು ಯಥೇಚ್ಛವಾಗಿ ಅನುಭವಿಸುವುದೇ ಮನುಷ್ಯನ ಉದ್ದೇಶವಾಗಿರಬೇಕು. ದೇವರು ನಮಗೆ ಇಂದ್ರಿಯಗಳನ್ನೂ ಮನಸ್ಸು ಬುದ್ಧಿಗಳನ್ನೂ ಕೊಟ್ಟಿರುವುದು ಹೀಗೆ ಸುಖಪಡುವುದಕ್ಕೋಸ್ಕರ. ಎಂದಬಳಿಕ, ಅವುಗಳ ದರ್ಶನವನ್ನು ಮಾಡಿ ಪ್ರಯೋಜನವೇನು ? ಈ ತರಹದ ಸೌಖ್ಯದ ವರ್ಣನೆಯು ಗೀತೆಯಲ್ಲಿ ಬಾಹ್ಯಸ್ಪರ್ಶಭೋಗ (೫.೨೧), ಸಂಸ್ಪರ್ಶಜಭೋಗ (೫.೨೨), ಭೋಗೈಶ್ವರ್ಯಗತಿ (೨.೪೩), ತ್ರೈಗುಣ್ಯ ವಿಷಯ (೨.೪೫), ಇಷ್ಟಭೋಗ (೩.೧೨), ಕಾಮೋಪಭೋಗ ೧೬.೧೧), ಕಾಮಭೋಗ (೧೬.೧೬), ಈ ಮುಂತಾದ ಶಬ್ದಗಳಲ್ಲಿ ಬಂದಿದ್ದು, ಗೀತೆಯು ಅಂಥ ಭೋಗವನ್ನು ಬಲವಾಗಿ ನಿಂದಿಸಿರುತ್ತದೆ.

ಇದಕ್ಕೆ ವಿರುದ್ಧವಾಗಿ ಕರ್ಮಗಳನ್ನೂ ಕಾಮಗಳನ್ನೂ ಭೋಗಗಳನ್ನೂ, ಇಚ್ಛೆಗಳನ್ನೂ ಸಂಪೂರ್ಣವಾಗಿ ತ್ಯಾಗಮಾಡುವವರನ್ನೂ ನಿಂದಿಸಿರುತ್ತದೆ. ಉದಾ–ಕರ್ಮೇಂದ್ರಿಯಗಳನ್ನು ಸಂಯಮನಮಾಡಿ, ಮನಸ್ಸಿನಿಂದ ಅವುಗಳನ್ನು ಸ್ಮರಿಸುವವನು ಮಿಥ್ಯಾಚಾರಿಯು (೩.೬) ಎಂದು ಅದು ಹೇಳುತ್ತದೆ. ಕರ್ಮಮಾಡದಿದ್ದರೆ ಶರೀರಯಾತ್ರೆಯೇ ನಡೆಯುದು ಎಂದು ಹೇಳುತ್ತದೆ (೩.೮), ಯೋಗವಿಲ್ಲದೆ ಬರೀ ಸಂನ್ಯಾಸವು ತರವಲ್ಲ (೫.೬), ಯಜ್ಞ, ದಾನ, ತಪ ಮುಂತಾದವುಗಳನ್ನು ಬಿಡಲೇಕೂಡದು (೧೮.೫); ನಿಯತವಾದುದನ್ನು ಬಿಡುವುದು ಯೋಗ್ಯವಲ್ಲ, ಅದು ತಾಮಸ ಪರಿತ್ಯಾಗವು (೧೮.೭). ಕಾಯಕ್ಲೇಶಭಯದಿಂದ ಕರ್ಮಮಾಡುವದನ್ನು ಬಿಡುವುದು ರಾಜಸತ್ಯಾಗವು (೧೮.೮).

ಸಾರಾಂಶ, ಕರ್ಮಗಳನ್ನು ಸಂಪೂರ್ಣವಾಗಿ ಬಿಡುವವರನ್ನೂ ಗೀತೆಯು ಪರಿಪರಿಯಾಗಿ ನಿಂದಿಸಿರುತ್ತದೆ. ಇಂಥ ಕರ್ಮಗಳನ್ನು ಬಿಡುವ ಮನೋವೃತ್ತಿಗೆ ಗೀತೆಯು ಕಶ್ಮಲ, ಕ್ಲೈಬ್ಯ, ಹೃದಯ ದೌರ್ಬಲ್ಯ, ಕಾರ್ಪಣ್ಯ ದೋಷ ಮುಂತಾದ ವಿಶೇಷಣಗಳನ್ನು ಕೊಟ್ಟಿರುತ್ತದೆ.

ಗೀತೆಯು, ಭೋಗತ್ಯಾಗಗಳ ಇವೆರಡೂ ತುಟ್ಟತುದಿಗಳನ್ನು ತಪ್ಪಿಸಿ, ನಡುವಿನ ಯೋಗಮಾರ್ಗವನ್ನು ಹಿಡಿಯಲು ಹೇಳುತ್ತದೆ. ಆ ಯೋಗದ ವರ್ಣನೆಯನ್ನು ಅದು ನಾನಾ ಪ್ರಕಾರವಾಗಿ ಮಾಡಿದೆ. ಸಮತ್ವವೇ ಯೋಗವು (೨.೪೮), ಕರ್ಮಗಳನ್ನು ಕುಶಲತನದಿಂದ ಮಾಡುವುದು ಯೋಗವು (೨.೫೦), ಯೋಗಸ್ಥನಾಗಿ ಕರ್ಮಮಾಡ ಬೇಕು (೨.೪೮), ಸಿದ್ಧಿಅಸಿದ್ಧಿಗಳನ್ನು ಸಮನಾಗಿ ಗಣಿಸುವುದು ಯೋಗವು (೨.೪೮), ಸರ್ವಕರ್ಮಗಳನ್ನು ಪರಮಾತ್ಮನಿಗೆ ಸಮರ್ಪಿಸಿ ಕರ್ಮಮಾಡುವುದು ಯೋಗವು (೩.೩೦), ರಾಗದ್ವೇಷಾದಿಗಳನ್ನು ಬಿಟ್ಟು ವಿಷಯಗಳನ್ನು ಅನುಭವಿಸುವುದು ಯೋಗವು (೨ ೬೪); ಸಮುದ್ರದಲ್ಲಿ ನದಿಗಳು ಪ್ರವೇಶಿಸುವಂತೆ, ಕಾಮಗಳು ಮನಸ್ಸನ್ನು ಪ್ರವೇಶಿಸಿದರೂ ಅದರಿಂದ ಚಲಚಿತ್ತನಾಗದಿರುವುದು ಯೋಗವು (೨.೭೦); ಇಂದ್ರಿಯಗಳನ್ನು ಮನಸ್ಸಿನಿಂದ ಬಿಗಿಹಿಡಿದು, ಕರ್ಮೇಂದ್ರಿಯಗಳಿಂದ ಕರ್ಮಯೋಗವನ್ನು ಆರಂಭಿಸುವವನು ಹೆಚ್ಚಿನವನು (೩.೭), ವಿದ್ವಾಂಸನು ಯೋಗಯುಕ್ತನಾಗಿ ಚೆನ್ನಾಗಿ ಕರ್ಮಮಾಡಬೇಕು (೩.೨೬); ಕಾಮಸಂಕಲ್ಪಗಳನ್ನು ವರ್ಜಮಾಡಿ ಸಕಲಕರ್ಮಗಳನ್ನೂ ಸಮಾರಂಭಿಸಬೇಕು (೪.೧೯); ಶಾರೀರಿಕ ಕರ್ಮಗಳನ್ನು ಮಾಡಿದರೆ ಕಿಲ್ಬಿಷವಿಲ್ಲ (೪.೨೧); ಸಿದ್ಧಿ ಅಸಿದ್ಧಿಗಳಲ್ಲಿ ಸಮಬುದ್ಧರೆ ಕರ್ಮಲೇಪವಿಲ್ಲ (೪.೨೨); ಕಾಮಗಳಿಂದ ನಿಸ್ಪೃಹನಾದವನಿಗೆ ಯುಕ್ತನೆನ್ನುತ್ತಾರೆ (೬.೧೮), ಸಮಬುದ್ಧಿಯುಳ್ಳವನು ಹೆಚ್ಚಿನವನು (೬.೯) ಎಂದು ಮುಂತಾಗಿ ಅನೇಕ ಬಗೆಯಾಗಿ ಸ್ತುತಿಸಿರುತ್ತದೆ. ಇದೇ ಈ ವಿಷಯದಲ್ಲಿ ಗೀತೆಯ ಸುವರ್ಣಮಧ್ಯವು. ಇದೇ ಸನಾತನಧರ್ಮದ ತತ್ವವೂ ಆಗಿದೆ.

ನಮ್ಮಲ್ಲಿಯ ಸಾಧುಸಂತರು ಸಂಸಾರವನ್ನು ಪರಿಪರಿಯಾಗಿ ನಿಂದಿಸಿರುವರು. ಅದು ನಳಿನದಳಜಲಬಿಂದು, ಶ್ವಾನನ ಕನಸು, ಕಾರ

ಪ್ರಪಂಚವು, ನೀರಗುಳ್ಳೆ, ಸುಳಿಗಾಳಿ, ಸಟೆಪ್ರಪಂಚವು, ಇಂದ್ರಜಾಲವೆಂದು ಕರೆದಿರುವರು. ಅದೇ ಮೇರೆಗೆ, ಮಾನವಶರೀರವು ಮೂಳೆಗಳ ಪಂಜರ, ಕರುಳುಗಳ ರಾಶಿ, ಮಲಮೂತ್ರಗಳ ಹಳ್ಳ, ನರಗಳ ಬಲೆ, ರಕ್ತಕ್ಕೆ ಆಗರ ಮೆದುಳಿಗೆ ಅಂಗಡಿ, ಹುಳಗಳಿಗೆ ಒಟ್ಟಿಲು, ನೊಣಗಳಿಗೆ ಮೆದೆ, ಹಸಿತೊಗಲಿನ ತಿದಿ-ಎಂಬುದಾಗಿ ನಾನಾವಿಧವಾದ ನಿಂದಾವ್ಯಂಜಕ ವಿಶೇಷಣಗಳನ್ನು ಕೊಟ್ಟು ಅದನ್ನು ಹೇಯವಾಗಿ ವರ್ಣಿಸಿರುವರು. ಹಂಟರಾರು, ಮುಕ್ಕೋರಾರು, ಸಂಸಾರವು ಬಲು ವಿಚಿತ್ರವೆಂದೂ ಹಾಡಿರುವರು. ಹೀಗೆ ಮಾನವಶರೀರದ ಮತ್ತು ಸಂಸಾರದ ತಿರಸ್ಕಾರವನ್ನು ಅತಿರೇಕವಾಗಿ ಮಾಡಿರುವುದೇನೋ ನಿಜ ಆದರೆ ಇದಕ್ಕೆ ವಿರುದ್ಧವಾಗಿ ಸಂಸಾರದ ಮತ್ತು ಮಾನವಶರೀರದ ಮಹಿಮೆಗಳನ್ನು ವರ್ಣಿಸುವ ಹಾಡುಗಳು ಇಲ್ಲದೆ ಇಲ್ಲ. ಅದರ ಮೇಲಿಂದ, ಸಂಸಾರವನ್ನು ತುಚ್ಛೀಕರಿಸುವ ಪ್ರವೃತ್ತಿಯು ಬೇಗನೆ ಕಡಿಮೆಯಾಗಿ, ಅದರ ಯೋಗ್ಯ ಬೆಲೆಯು ಜನತೆಯ ಕಣ್ಣಿನ ಮುಂದೆ ಪುನಃ ಇಡಲ್ಪಟ್ಟಿದೆ. ಸಂಸಾರವನ್ನಾಗಲಿ, ದೇಹವನ್ನಾಗಲಿ ಹೀಗಳೆಯುವುದರ ಮುಖ್ಯ ಉದ್ದೇಶವು ಸಂಸಾರವನ್ನು ಮಿತಿಮೀರಿ ಭೋಗಿಸಬಾರದೆಂಬುದೇ ಇರುತ್ತದೆ. ಈ ಕೆಳಗಿನ ಹಾಡುಗಳಿಂದ ಈ ಮಾತು ಸ್ಪಷ್ಟವಾಗುವುದು.

ಸಂಸಾರದ ಮಹಿಮೆಯ ವರ್ಣನೆಯನ್ನು ತುಸು ಕೇಳಿರಿ. "ಶಿವಯೋಗಿ ಸಕಲ ಸಂಸಾರದೊಳಿರ್ದಡೇ । ಸವಿವೇಕಿಯೆಂತೆ ಮೋಹಿಸಿ ಕೆಡುವುದುಂಟೆ" ಎಂದು ಸರ್ವಭೂಷಣ ಕವಿಗಳು ಉದ್ಗಾರ ತೆಗೆದಿರುವರು. ಅನುಭವಾಮೃತದಲ್ಲಿ ಮಹಾಲಿಂಗರಂಗನು.

**'ದಾನವನು ಪಾತ್ರದಲಿ, ನಿಜಸಂತಾನವನು ಪತ್ನಿಯಲಿ ।**
**ಯಜ್ಞವಿಧಾನವ......। ಸಾಂಗವಲಿ ಮಾಡಲು ಸ್ವರ್ಗಸುಖವಹುದು;**

ಎಂದು ಸಂಸಾರದ ಮಹತ್ವವನ್ನು ಹೇಳಿರುವನು.

ಅವನೇ ಸಂಸಾರವನ್ನು ಅನುಭವಿಸುವ ರೀತಿಯನ್ನು ಬಲು ಸುಂದರವಾಗಿ ಹೀಗೆಂದು ವರ್ಣಿಸಿರುವನು.

“ಬಸಿಲುದೊರೆಯಂದದಲಿ ತೋರುವ |
ಹುಸಿಯು ಸಂಸಾರದಲಿ ಯೋಗಿಯು |
ವಿಷಯಗಳನನುಭವಿಸುವುದು ಧಿಟವೆಂಬುದಾಗಿಹುದು ||
ಮಸಗಿ ಮನದಲಿ ಬ್ರಹ್ಮದಲ್ಲಿಯೇ | ವ್ಯಸನವಾಗಿಹನುತ್ತಮಾಂಗದ |
ಲೇಸವ ಕಲಶವಲ್ಲಿಟ್ಟು ಬುದ್ಧಿಯ ಕುಣಿವ ನಟನಂತೆ’ ||

ಎಂದರೆ ತಲೆಯ ಮೇಲೆ ತುಂಬಿದ ಕೊಡವನ್ನು ಹೊತ್ತುಕೊಂಡು ಥೈ ಥೈ ಕುಣಿಯುವಾಗ, ಆ ಕುಣಿಯುವವನು ಎಷ್ಟೇ ಕುಣಿದರೂ ತನ್ನ ಲಕ್ಷ್ಯವನ್ನೆಲ್ಲ ಆ ಕೊಡದ ಮೇಲೆಯೇ ಇಟ್ಟಿರುವಂತೆ, ಸಂಸಾರಿಯು ಎಷ್ಟೇ ಸಂಸಾರದ ಕೃತ್ಯಗಳನ್ನು ಆಚರಿಸಿದರೂ ತನ್ನ ಲಕ್ಷ್ಯವನ್ನು ಪರಮಾತ್ಮನಲ್ಲಿರಿಸಿ, ಸರ್ವವ್ಯಾಪಾರಗಳನ್ನು ಮಾಡಬೇಕು. ಪುರಂದರ ದಾಸರು ಅದಕ್ಕಾಗಿಯೇ

ಇಲ್ಲೇ ವೈಕುಂಠ ನಮ್ಮ ಲಕುಮಿ |
ವಲ್ಲಭ ಪರಿಪೂರ್ಣನೆಂದು ಭಜಿಸುವರಿಗೆ |

ಎಂಬುದಾಗಿ ಈ ಭೂಲೋಕದ ವರ್ಣನೆಯನ್ನು ಮಾಡಿರುವರು. ಆದ ಕಾರಣ ಜಗನ್ನಾಥದಾಸರು,

‘ಮಲಗುವಾಗಲು ಏಳುವಾಗಲು | ಕುಳಿತು ಮಾತಾಡುತಲಿ ಮನೆಯೊಳು |
ಕೆಲಸಗಳ ಮಾಡುತಲಿ ಮೈದೊಳೆವಾಗ ಮಲುವಾಗ ||
ಕಲುಷದೂರನ ಸಕಲತಾವಿಲಿ | ತಿಳಿಯ ತತ್ತನ್ನಾಮರೂಪವ |
ಬಳಿಯಲಿಪ್ಪನು ಒಂದರಕ್ಷಣ ಬಿಟ್ಟಗಲನವರ ||

ಎಂದು ಸಂಸಾರದ ಯಾವ ಕೃತ್ಯವನ್ನೂ ಬಿಡಲಿಕ್ಕೆ ಕಾರಣವಿಲ್ಲವೆಂದು ಹೇಳಿದ್ದಾರೆ. ಸಾರಾಂಶ, ಸಂಸಾರವು ತುಚ್ಛವಲ್ಲ, ಅವಶ್ಯವು. ಆದಕಾರಣವೇ ಪುರಂದರ ದಾಸರು—

ಈಸಬೇಕು, ಇದ್ದು ಜಯಿಸಬೇಕು |
ಹೇಸಿಯ ಸಂಸಾರದಿ ಆಶೆ ಲೇಶವಿಲ್ಲದ್ಹಾಂಗೆ ||ಪಲ್ಲ||
ತಾಮರಸಜಲದಂತೆ ಪ್ರೇಮವಿಟ್ಟು ಭವದೊಳು |
ಸ್ವಾಮಿರಾಮನೆನುತ ಪಾಡಿ |
ಕಾಮಿತವ ಕೈಕೊಂಬರೆಲ್ಲ ||
ಗೇರುಹಣ್ಣಿನಲಿ ಬೀಜಸೇರಿದಂತೆ |
ಸಂಸಾರದಿ ಮೀರಿ ಆಶೆಮಾಡದಲೆ |
ಧೀರ ಕೃಷ್ಣನ ಭಕುತರೆಲ್ಲ ||

ಎಂಬುದನ್ನು ಮರೆಯದಿರಬೇಕು.

ಇದೇ ಪ್ರಕಾರ, ಈ ಶರೀರವನ್ನೂ ನಮ್ಮವರು ಅನೇಕ ಬಗೆಯಿಂದ ಕೊಂಡಾಡಿರುವರು.

'ತನುವೆಂಬ ಗರುಡಿಯೊಳನುಭವಧೀರರು |
ಘನಯೋಗ ಸಾಧನವ ಮಾಡಿದರೋ |

ಎಂದು ಸರ್ಪಭೂಷಣ ಕವಿಗಳು ಕೈವಲ್ಯಕಲ್ಪವಲ್ಲರಿಯಲ್ಲಿ ಹೇಳಿದಂತೆ ಈ ಶರೀರವು ಯೋಗಕ್ಕೆ ಒಂದು ಅವಶ್ಯವಾದ ಗರಡೀಮನೆಯು. ಈ ಗರಡೀಮನೆಯಲ್ಲಿ ಸಾಧನ ಮಾಡದೆ ಯಾರೂ ಮುಕ್ತಿಪಡೆಯಲಾರರು. ಈ ಶರೀರವನ್ನು ಕೇವಲ ತಮ್ಮ ಸಲುವಾಗಿ ಉಪಯೋಗಿಸಿಕೊಳ್ಳಬಾರದೆಂದು ಹೇಳುವುದು ಅವರ ತಾತ್ಪರ್ಯ. ಆದುದರಿಂದಲೇ,

ಹೊಟ್ಟೆಗೋಸುಗ | ಥಟ್ಟನುಣಿಸುತ |
ಕೆಟ್ಟ ಮನುಜನ | ಕಟ್ಟಿಒಯ್ದು ಯಮಪಟ್ಟಣದೊಳಿತ್ತಿಟ್ಟು ಬಿಡುತಿಹರು ||

ಎಂಬುದಾಗಿ ಪುರಂದರ ದಾಸರು ಹೇಳಿರುವರು. ನರರ ದೇಹವು ಬಹು ಸುಕೃತಲಬ್ಧವೆಂಬುದನ್ನು ಮಹಲಿಂಗನು,

ಭೋಗಕ್ಕೆ ಸುರನರ ದೇಹಗಳ ಧರಿಸಿ || ವಿಹರಿಸುತ್ತಿಹ...

ಎಂದು ಮುಂತಾಗಿ ವರ್ಣಿಸಿರುವನು.

ಆದುದರಿಂದಲೇ, ಈ ಶರೀರವನ್ನು ವೇದಾಂತಿಗಳು ಹೀಯಾಳಿಸದೆ, ಅದಕ್ಕೆ ಅತ್ಯಂತ ಮಹತ್ವವನ್ನು ಕೊಟ್ಟಿರುವರು. ನಮ್ಮ ದೇಹವು ದೇವರ ರಥವು; ಅದು ದೇವರಿಗೆ ಆವಾಸಭೂಮಿಯು. ದೇಹವು ದೇಗುಲವು; ಅದು ಈಶ್ವರನು ಆರೂಢವಾಗಿರುವ ಯಂತ್ರವು. ಅದು ಮುಕ್ತಿಯ ಮಹಾದ್ವಾರವು ಎಂದು ಅವರು ಭಾವಿಸಿದ್ದರು. ಪುರಂದರದಾಸರು,

"ಮಾನವ ಜನ್ಮ ದೊಡ್ಡದು | ಹಾಸಿ ಮಾಡಬೇಡಿ ಹುಚ್ಚಪ್ಪಗಳಿರಾ |
ಕಣ್ಣು ಕೈ ಕಾಲ್ಕಿವಿ ನಾಲಿಗೆ ಇರಲಿಕ್ಕೆ | ಮಣ್ಣು ಮುಕ್ಕಿ ಮರುಳಾಗುವರೇ ||

ಎಂದು ಹಾಡಿದುದು ಸರಿಯಲ್ಲವೆ? ಇಲ್ಲ, ಇಲ್ಲ. ನಮ್ಮವರು ಶರೀರವನ್ನು ತುಚ್ಛೀಕರಿಸಲಿಲ್ಲ.

ಎನ್ನ ಕಾಯವು ನಿನಗೆ ಉನ್ನತಾಲಯವಾಯ್ತು |
ಇನ್ನೆನಗೆ ಭಯವುಂಟೆ | ಎಲೆ ಲಿಂಗವೇ ||

ಎಂಬ ಮುಪ್ಪಿನ ಷಡಕ್ಷರಿಗಳೆಂಬ ಲಿಂಗಾಯತ ಶರಣರ ನುಡಿಯು ಶರೀರದ ಮಹಿಮೆಯನ್ನು ತೋರಿಸುವದಿಲ್ಲವೆ?

"ಹರಿಭಕುತಿಯುಳ್ಳವರ ಶರೀರವೇ ಕುರುಕ್ಷೇತ್ರ ||ಪಲ್ಲ||
ಅವರು ನರರೆಂದು ಬಗೆವವರೆ ನರಕವಾಸಿಗಳು ||ಅನುಪಲ್ಲ||
ಸದನಲನ ನೆನೆಸುವ ಹೃದಯ ಕಾಶೀಪುರವು |
ಮಧುವೈರಿ ನೆನೆವ ಮನ ಮಣಿಕರ್ಣಿಕೆ ||
ಪದುಮನಾಭನ ಪಾಡ್ವ ವದನವೇ ವೈಕುಂಠ |
ಪದಮಲನ ಭಜಿಸುವ ಜಿಹ್ವೆ ಶ್ರೀಮುಷ್ಣ |
ನರಹರಿಯ ನಿರೀಕ್ಷಿಸುವ ನಯನ ದ್ವಾರಾವತಿಯು |
ಸಿರಿಧರಗೆ ಶರಣೆಂಬ ಶಿರವೆ ಬದರಿ |
ಮುರಹರನ ಕಥೆಯ ಕೇಳ್ವ......||

ಎಂದು ಮುಂತಾಗಿ ಪುರಂದರದಾಸರು ಈ ದೇಹದ ಮತ್ತು ಅವಯವಗಳ ಪಾವಿತ್ರ್ಯವನ್ನು ಪರಿಪರಿಯಿಂದ ಪೊಗಳಿದ್ದಾರೆ. ಎಂಭತ್ತುನಾಲ್ಕು ಲಕ್ಷ ಯೋನಿಗಳಲ್ಲಿ ತಿರುತಿರುಗಿ ಮಾನವ ಜನ್ಮಕ್ಕೆ ಬಂದಿರುವ ನರನು ಮಾನವದೇಹವನ್ನು ಧಿಕ್ಕರಿಸಿ ಸಾಗೀತೆ? ದೇವತೆಗಳು ಕೂಡ ತಮ್ಮ ಕರ್ಮಸಾಧನೆಗಾಗಿ ಈ ಭೂಲೋಕದಲ್ಲಿ ಬಂದು ನರ ಜನ್ಮ ತಾಳಬೇಕಾಗುತ್ತದೆಂಬ ಬಳಿಕ ನಮ್ಮವರು ನರಜನ್ಮವನ್ನು ತುಚ್ಛೀಕರಿಸಿರುವರೆಂದು ಹೇಗೆ ಹೇಳಲಾದೀತು?

ಇಂದಿನ ನರಜನ್ಮವು | ನಿನ್ನ ಕೃಪೆಯಿಂದ ದೊರಕಿತಲ್ಲೊ |
ಮುಂದೆ ನಾ ತಾಯುಉದರದಿಂ | ಜನಿಸದ ಹಾಗೆ ಮಾಡಬೇಕೆಲೊ ವಿಠಲ ತಂದೆ ||

ಎಂಬುದಾಗಿ, ಪುನರ್ಜನ್ಮವಾಗದೆ ಮುಕ್ತಿಹೊಂದುವುದಕ್ಕೆ ಅವರ ಕಟಾಕ್ಷ. ಈ ದೇಹವು ಬಹಳ ದುರ್ಲಭವು. ಆದಕಾರಣ,

'ಮಾನವ ಜನ್ಮ ದುರ್ಲಭವಿದು | ಮಾಧವನ ಕೃಪೆಯಲಿ ಬಂದಿದೆ |
ಹೀನಜನರ ಕೂಡಿ ನೀನು | ಹಾಳು ಮಾಡಿಕೊಳಲು ಬೇಡ ||

ವೆಂದು ಪುರಂದರದಾಸರು ಈ ಜನ್ಮದ ಸದುಪಯೋಗವನ್ನು ಮಾಡಿಕೊಳ್ಳಲಿಕ್ಕೆ ಹೇಳಿದ್ದಾರೆ, ಸ್ತ್ರೀಪುರುಷರೆಂದರೆ ದೇವರ ಪ್ರತಿಮೆಗಳೇ ಎಂದು

ಜಲಜನಾಭನಿಗೆರಡು ಪ್ರತಿಮೆಗ | ಳಿಳೆಯೊಳಗೆ ಜಡ ಚೇತನಾತ್ಮಕ |
ಚಲದೊಳರ್ಬಗೆ ಸ್ತ್ರೀಪುರುಷಭೇದದಲಿ

ಎಂಬದರಲ್ಲಿ ಜಗನ್ನಾಥದಾಸರು ಅಭಿಪ್ರಾಯಪಟ್ಟಿದ್ದಾರೆ.

ಈ ಚಲಪ್ರತಿಮೆಗಳ ಪೂಜಿಸದವರು ಮಲತಿಸ್ನುವವರೆಂದು ದಾಸರು ಹಾಡಿರುವರು. ಇವುಗಳ ಮೇಲಿನಿಂದ ಸ್ತ್ರೀಜನ್ಮವನ್ನು ನಮ್ಮವರು ತುಚ್ಛೀಕರಿಸಿಲ್ಲವೆಂಬುದು ಗೊತ್ತಾಗುವುದಿಲ್ಲವೆ ? ಸ್ತ್ರೀಯರಿಗೆ ಬೇರೆ ಬಗೆಯ ಕರ್ತವ್ಯಗಳನ್ನು ಹೇಳಿದುದರಲ್ಲಿ, ಅವರನ್ನು ಹೀಯಾಳಿಸುವುದು ಉದ್ದೇಶವಿರದೆ, ಅವರ ಸ್ವಭಾವದ ಮೇರೆಗೆ, ಸ್ವಧರ್ಮದ ಮೇರೆಗೆ ಅವರಿಗೆ ಕರ್ತವ್ಯಕರ್ಮಗಳನ್ನು ಹಚ್ಚಿಕೊಡುವುದೇ ಆಗಿದೆಯೆಂಬುದು ವಿದಿತವಾಗುವುದು. ಇಲ್ಲ, ನಮ್ಮವರು ಯಾವ ಜೀವವನ್ನೂ–ಜಡವನ್ನೂ ಕೂಡ ತುಚ್ಛೀಕರಿಸಿರುವುದಿಲ್ಲ. ಪರಮಾತ್ಮನು ಅಣುರೇಣು ತೃಣಕಾಷ್ಠಗಳಲ್ಲಿ ತುಂಬಿರುವನೆಂಬುದನ್ನು ತಿಳಿಯಬೇಕೆಂಬುದು ಅವರ ಉದಾತ್ತವಾದ ಉದ್ದೇಶ.

ಎರೆದರೆ ನೆನೆಯದು, ಮರೆದರೆ ಬಾಡದು ।
ಮುರುಳಿಲ್ಲ ಹುರುಳಿಲ್ಲ, ಲಿಂಗಾರ್ಚನೆ:
ಕೂಡಲಸಂಗಮದೇವ ! ಜಂಗಮಕ್ಕೆರೆದರೆ
ಸ್ಥಾವರನೆನೆಯಿತ್ತು

ಎಂದು ಬಸವಣ್ಣನವರು ಜಂಗಮರನ್ನು ವರ್ಣಿಸಿರುವರು. ಆದುದರಿಂದಲೇ ಜಗನ್ನಾಥದಾಸರು,

'ಆವಕ್ಷೇತ್ರಕೆ ಪೋದರೇನು । ನ್ನಾವತೀರ್ಥದಿ ಮುಳುಗಲೇನು
ನ್ನಾವ ಜಪತಪ ಹೋಮ ದಾನವ ಮಾಡಿ ಫಲವೇನು ॥
ಶ್ರೀವರ ಜಗನ್ನಾಥ ವಿಠ್ಠಲನ । ಈ ವಿಧದಿ ಜಂಗಮಸ್ಥಾವರ ।
ಜೀವರೊಳು ಪರಿಪೂರ್ಣನೆಂದರಿಯದಿಹ ಮಾನವನು ॥

ಎಂದು ಹಾಡಿರುವರು. ಈ ಶರೀರವು ಒಂದು ದೊಡ್ಡ ಪಟ್ಟಣ. ಈ ಪಟ್ಟಣಕ್ಕೆ ಹರಿಯು ಅರಸನು ಎಂಬುದನ್ನು ಜಗನ್ನಾಥದಾಸರು.

ಮಧುವಿರೋಧಿಯ ಪಟ್ಟಣಕೆ ಪೂ । ರ್ವಕವಾಟಗಳಕ್ಷಿ ನಾಸಿಕ ॥......

ಮುಂತಾಗಿ ವರ್ಣಿಸಿ ಮುಂದೆ

ಅನುಭವಿಸ ವಿಷಯಂಗಳೀ ಪ । ಟ್ಟಣಕೆ ಬಪ್ಪ ವಸಾರಗಳು ಜೀ ।
ವನು ಸುವರ್ತಕ, ಕಪ್ಪಗಳ ಕೈಕೊಂಬ ಹರಿ ತಾನು ॥

ಎಂಬುದಾಗಿ ಜೀವ ಪರಮಾತ್ಮರ ಸಂಬಂಧವನ್ನು ಬಲು ಸುಂದರವಾಗಿ

ಬಣ್ಣಿಸಿರುವರು. ಅವರು ಶರೀರದ ವರ್ಣನೆಯನ್ನು ಈ ರೀತಿಯಾಗಿ ಮಾಡಿರುವರು,

ಈ ಶರೀರವೇ ರಥ, ಪತಾಕೆ ಸು |
ಪಾಶಗಳು, ಪುಂಡ್ರಗಳು ಧ್ವಜ, ಓಂ |
ಹಾಸನವು ಚಿತ್ತವು ಸುಬುದ್ಧಿಯು ಕಲಶ, ಸನ್ಮನವು |
ಪಾಶ, ಗುಣದಂಡತ್ರಯಗಳು, ಶು |
ಭಾರುಭದ್ರಯು ಕರ್ಮ ಚಕ್ರ ವು |
ಹಾಸಮುಘಾರ್ಶ್ವಗಳು ದಶಕರಣಂಗಳೆನಿಸುವವು ||

ಕನಕದಾಸರು,

ಹೀನಕರ್ಮಗಳಿಂದ ಬಹುವಿಧ |
ಯೋನಿಯೊಳು ಸಂಚರಿಸಿ ಪ್ರಾಂತ್ಯಕೆ |
ಮಾನುಷತ್ವವನೈದಿ ಸರ್ವೋತ್ತಮನು ಹರಿಯೆಂಬ ||
ಜ್ಞಾನಭಕ್ತಿಗಳಿಂದೆ ವೇದೋ |
ಕ್ತಾನುಸಾರ ಸಹಸ್ರಜನ್ಮ.............

ಎಂದು ಹಾಡಿರುವರು. ಆದುದರಿಂದ, ಭೋಗವನ್ನು ಬಿಡುವುದು ಉದ್ದೇಶವಲ್ಲ, ತ್ಯಾಗವನ್ನು ಮಾಡುವುದೂ ಉದ್ದೇಶವಲ್ಲ, ಯೋಗವನ್ನು ಮಾಡುವುದೇ ಉದ್ದೇಶವೆಂಬುದು ಸ್ಪಷ್ಟವಾಯಿತು.

**(೨) ಸಮಬುದ್ಧಿ**—ಸರ್ವರನ್ನೂ ವಿಷಮಬುದ್ಧಿಯಿಂದ ಕಾಣುವುದು ದುರ್ಗುಣವು; ಅಂದರೆ, ಸರ್ವರೂ ದೇವರ ಮಕ್ಕಳೆಂದೇ ತಿಳಿಯಬೇಕಲ್ಲದೆ, ಅನ್ಯಥಾ ಭಾವಿಸಬಾರದು. ಹಾಗೆ ತಿಳಿಯದವರನ್ನು, ತಮ್ಮ ಮತ್ತು ಅನ್ಯರ ದೇಹಗಳಲ್ಲಿರುವ ಪರಮಾತ್ಮನನ್ನು ದ್ವೇಷಿಸುವವರು, ಹೊಟ್ಟೆಕಿಚ್ಚುಳ್ಳವರು (೧೬.೧೮) ಎಂದು ಗೀತೆಯು ಕರೆಯುತ್ತದೆ. ಇದಕ್ಕೆ ವಿರುದ್ಧವಾಗಿ, ಸರ್ವರನ್ನೂ ಸಮನಾಗಿ ಕಾಣುವುದೆಂದರೆ, ಸರ್ವರೂ ಸರ್ವವಿಧದಿಂದಲೂ, ಸರ್ವರೀತಿಯಿಂದಲೂ ಸಮರೆಂದು ಕಾಣುವುದೆಂದು ಅರ್ಥವಲ್ಲ. ಅದೂ ದುರ್ಗುಣವೇ. ಹಾಗಾದರೆ, ಗೀತೆಯು ಸಮರ್ಥಿಸುವ ಸಮಬುದ್ಧಿಯು ಯಾವುದು? ಗೀತೆಯು ಸಮಬುದ್ಧಿಯ ತನ್ನ ಕಲ್ಪನೆಯನ್ನು ಹೀಗೆಂದು ಕೊಟ್ಟಿದೆ. ಭಿನ್ನಭಿನ್ನವೇ ಆಗಿರುವ ಯಾವತ್ತು ಪದಾರ್ಥಗಳಲ್ಲಿ ಬ್ರಹ್ಮನೊಬ್ಬನೇ ಸರ್ವತ್ರದಲ್ಲಿ ವ್ಯಾಪ್ತನಾ

ಗಿರುವುದೆಂಬುದನ್ನು ತಿಳಿಯುವುದೇ ಸಾತ್ವಿಕ ಜ್ಞಾನವೆಂದೂ (೧೮.೨೦) 'ಎಲ್ಲರಲ್ಲಿಯೂ ಇರುವ ನಾನು ಒಬ್ಬನೇ ಎಂಬ ಭಾವನೆಯಿಂದ ನನ್ನನ್ನು ಭಜಿಸುವವನು ಯೋಗಿಯು' (೬.೩೧) ಎಂದೂ ಹೇಳಿರುವುದರಿಂದ, ಯಾವತ್ತು ಪ್ರಾಣಿಗಳಲ್ಲಿ ಒಬ್ಬನೇ ಪರಮಾತ್ಮನಿರುವನೆಂದು ತಿಳಿಯುವುದು ಸಮಬುದ್ಧಿಯು ಎಂದು ಹೇಳಿದಂತಾಯಿತು. ಸಾರಾಂಶ, ಸಮದರ್ಶನವೆಂದರೆ, ದೇವರನ್ನು ಎಲ್ಲೆಡೆಯಲ್ಲಿ ಕಾಣುವುದು ಎಂದು ಅರ್ಥ. ಅದಕ್ಕೆ ಮತ್ತೂ ಒಂದು ಅರ್ಥವಿದೆ. ಅದೇನೆಂದರೆ ಸುಖವೇ ಇರಲಿ, ದುಃಖವೇ ಇರಲಿ, ಅದು ತನಗೆ ಹೇಗೋ, ಹಾಗೆ ಎಲ್ಲರಿಗೂ—ಎಂಬುದಾಗಿ ತಿಳಿಯುವ, ಎಂದರೆ ತನ್ನಂತೆ ಪರರ ಬಗೆಯುವ ಯೋಗಿಯು ಎಲ್ಲಕ್ಕೂ ಹೆಚ್ಚಿನ ಯೋಗಿಯು (೬.೩೨) ಎಂದು ಹೇಳಿದೆ. ಸಾರಾಂಶ, ದೇವರು ಎಲ್ಲರಲ್ಲಿಯೂ ಒಬ್ಬನೇ ಇದ್ದಾನೆಂದು ತಿಳಿದರೆ ಸಾಲದು; ಎಲ್ಲರ ಸುಖದುಃಖಗಳೂ ತನ್ನ ಸುಖದುಃಖಗಳೇ ಎಂಬ ಭಾವನೆಯು ಬೇಕು. ಅದೇ ಪ್ರಕಾರ ಎಲ್ಲರಿಗೂ ಮುಕ್ತಿದ್ವಾರವು ತೆರವಿದೆಯೆಂದು ತಿಳಿಯುವದೂ ಸಮಬುದ್ಧಿಯು. ಸ್ತ್ರೀಯರೇ ಇರಲಿ, ವೈಶ್ಯರೇ ಇರಲಿ ಶೂದ್ರರೇ ಇರಲಿ, ಅವರೆಲ್ಲರೂ ಕೂಡ ಮುಕ್ತಿಯನ್ನು ಹೊಂದುತ್ತಾರೆ (೯.೩೨) ಎಂದು ಗೀತೆಯು ಹೇಳಿದೆ. ಈ ತರಹದ ಸಮಬುದ್ಧಿಯೇ ಸದ್ಗುಣವಲ್ಲದೆ ನಾಯಿ ಚಂಡಾಲರನ್ನು ಸಮನಾಗಿ ತಿಳಿಯುವುದೆಂದರೆ ಸರ್ವರನ್ನು ಸರ್ವವಿಧವಾಗಿ ಸಮರೆಂದು ತಿಳಿಯುವುದಲ್ಲ.

ಹೀಗೆ, ಮಿಕ್ಕ ಅನೇಕ ವಿಷಯಗಳಲ್ಲಿಯೂ ಗೀತೆಯು ಅರಿಸ್ಟಾಟಲ್‌ನ ಸುವರ್ಣಮಧ್ಯದ ಮಾರ್ಗವನ್ನವಲಂಬಿಸಿರುತ್ತದೆಂಬುದನ್ನು ನಾವು ತುಸು ವಿಚಾರದಿಂದ ಕಂಡುಕೊಳ್ಳಬಹುದು. ಅವುಗಳಲ್ಲಿ ಕೆಲವನ್ನು ಇಲ್ಲಿ ಸೂಚಿಸುತ್ತೇವೆ. ವಿಹಿತಕರ್ಮವೆಂಬುದು ಅಕರ್ಮ ಮತ್ತು ವಿಕರ್ಮಗಳ ಮಧ್ಯಬಿಂದುವು. ಸ್ವಾರ್ಥಕರ್ಮ ಮತ್ತು ಪರಾರ್ಥಕರ್ಮಗಳ ನಡುವಿನ ಮಾರ್ಗವು ಭಗವತ್ಕರ್ಮವು,ಯಜ್ಞಾರ್ಥಕರ್ಮವು. ಗೀತೆಯು ಕೇವಲ ವೈಯಕ್ತಿಕ ಧರ್ಮವನ್ನೂ ಸ್ವಾತಂತ್ರ್ಯವನ್ನೂ ಎತ್ತಿ ಹಿಡಿಯುವುದಿಲ್ಲ; ಇತ್ತ ಕೇವಲ ಸರ್ವಸಾಮುದಾಯಿಕ ಧರ್ಮವನ್ನೂ ಸ್ವಾತಂತ್ರ್ಯವನ್ನೂ ಎಂದರೆ ಕೇವಲ ಸಾಮ್ಯವಾದ

ವನ್ನೂ ಪುರಸ್ಕರಿಸುವುದಿಲ್ಲ. ಅದು ಮಧ್ಯಮಮಾರ್ಗವಾದ ಪರಾರ್ಥ ಶ್ರಮ ಧರ್ಮಕ್ಕೆ ಬೆಂಬಲ ಕೊಡುತ್ತದೆ. ಎರಡೂ ಧರ್ಮಗಳೊಳಗಿನ ಲಾಭಗಳನ್ನು ಕ್ರೋಡೀಕರಿಸಿ, ಹಾನಿಗಳನ್ನು ಆದಷ್ಟು ಮಟ್ಟಿಗೆ ಕಡಿಮೆ ಮಾಡುವ ಯುಕ್ತಿಯಿದು. ಏನೂ ಕುಂದಿಲ್ಲದ ಸಮಾಜವು ಮನಸ್ಸಿನಲ್ಲಿಯ ಮಂಡಿಗೆಯು. ಯಾವ ಸಮಾಜವ್ಯವಸ್ಥೆಯೂ ವ್ಯವಹಾರದಲ್ಲಿ ಪರಿಪೂರ್ಣತೆಯನ್ನು ಹೊಂದಿರುವುದಿಲ್ಲ. ಪರಾರ್ಥಶ್ರಮವ್ಯವಸ್ಥೆಯನ್ನು ಎತ್ತಿ ಹಿಡಿಯುವುದೆಂಪರೆ ಅದರ ಈಗಿನ ಅಂದಗೆಟ್ಟ ರೂಪವನ್ನು ಎತ್ತಿ ಹಿಡಿಯುವುದೆಂದು ಅರ್ಥವಲ್ಲ, ಅಥವಾ ಅದರ ಬಾಹ್ಯಸ್ವರೂಪದಲ್ಲಿ ಏನೂ ಬದಲಾಗಲೇ ಕೂಡದು ಎಂದೂ ಅರ್ಥವಲ್ಲ. ಅದರ ಮೂಲಭೂತ ತತ್ವಗಳು ಅಬಾಧಿತವಾಗಿವೆಯೆಂದಷ್ಟೇ ಅದರ ಅರ್ಥ. ಅಲ್ಲದೆ, ಸಮಾಜಶಾಸ್ತ್ರವನ್ನು ಅಭ್ಯಾಸ ಮಾಡುವವರೂ ಸಮಾಜದ ಕುಂದುಗಳನ್ನು ತೋರಿಸುವವರೂ ಸಮಾಜದ ಮುಖ್ಯ ಧ್ಯೇಯಗಳಾವ ಏರಬೇಕೆಂಬುದನ್ನು ಮುಂಚೆ ನಿರ್ಣಯಿಸಿ, ಆ ಧ್ಯೇಯಗಳನ್ನು ತಂದು ಕೊಡುವುದಕ್ಕೆ ಯಾವ ಸಮಾಜಸಂಸ್ಥೆಯು ಹೆಚ್ಚಿಗೆ ಉತ್ತಮವಾದುದೆಂಬುದನ್ನು ಯೋಚಿಸಬೇಕು. ಸಾರಾಂಶ, ಈ ವಿಷಯದಲ್ಲಿ, ತುಲನಾತ್ಮಕ ಅಭ್ಯಾಸವು ಅತ್ಯಾವಶ್ಯಕ. ಸಾಮ್ಯವಾದವು ಪ್ರಯೋಗಾತ್ಮಕ ಸ್ಥಿತಿಯಲ್ಲಿರುವುದರಿಂದಲೂ, ಹೊಸ ಕಲ್ಪನೆಗಳ ಅನಿಷ್ಟ ಪರಿಣಾಮಗಳು ಸಮಾಜದಲ್ಲಿ ಒಡಮೂಡುವುದಕ್ಕೆ ಕಾಲಾವಧಿಯು ಬೇಕಾಗುವುದರಿಂದಲೂ ಈ ತರಹದ ಅಭ್ಯಾಸವನ್ನು ಮಾಡುವುದು ಬಹಳ ಕಠಿನ ಕೆಲಸವು. ಅದಕ್ಕೆ ಬಹಳ ದೊಡ್ಡ ಅಧಿಕಾರವು ಬೇಕು. ಇರಲಿ, ಗೀತೆಯಲ್ಲಿ ಹೇಳಿದ ಶ್ರದ್ಧೆ, ಆಹಾರ, ಯಜ್ಞ, ತಪ, ದಾನ, ತ್ಯಾಗ, ಜ್ಞಾನ, ಕರ್ಮ, ಕರ್ತೃ, ಬುದ್ಧಿ ಮತ್ತು ಸುಖ ಮುಂತಾದವುಗಳ ತ್ರೈವಿಧ್ಯಗಳನ್ನು ಅವಲೋಕಿಸಿದರೆ, ಗೀತೆಯು ಅವುಗಳಲ್ಲಿ ತಾಮಸ ರಾಜಸಗಳ ಎರಡು ತುಟ್ಟತುದಿಗಳನ್ನು ತಪ್ಪಿಸಿ, ಸಾತ್ವಿಕದ ನಡುಮಾರ್ಗವನ್ನವಲಂಬಿಸುವುದಕ್ಕೆ ಹೇಳುತ್ತದೆಂದು ಸಾಮಾನ್ಯವಾಗಿ ಹೇಳಬಹುದು. ಸಾತ್ವಿಕದಲ್ಲಿ ಯುಕ್ತಾಹಾರವಿಹಾರಕ್ಕೆ ಅನುವು ಇದ್ದಂತೆ ತಾಮಸರಾಜಸಗಳಲ್ಲಿ ಇರುವುದಿಲ್ಲ. ಹರ್ಷಾಮರ್ಷ, ಸುಖದುಃಖ, ಲಾಭಾಲಾಭ, ಜಯಾ

ಜಯ, ಮಾನಾಪಮಾನ, ನಿಂದಾಸ್ತುತಿ, ಶುಭಾಶುಭ ಸಂತಾಪ ವಿರುದ್ಧವಾಗಿರುವ ಎರಡೂ ತುದಿಗಳನ್ನು ತಪ್ಪಿಸಿ, ನಡುವಿನದೊಂದು ನಿಷ್ಕಾಮವಾದ, ಶಾಂತಿಮಯವಾದ, ಆನಂದಮಯವಾದ ಮನಃಸ್ಥಿತಿ ಯನ್ನು ಪಡೆಯಲು ಅದು ಹೇಳುತ್ತದೆ. ಶಾಸ್ತ್ರವಿಧಿಯ ಮಾರ್ಗವು ಕಾಮಾಚಾರ ಮತ್ತು ಸ್ವೇಚ್ಛಾನಿಯಂತಾಚಾರಗಳ ನಡುವಿನ ಮಾರ್ಗವು.

ಈ ಬಗೆಯಾಗಿ, ನಾವು ಗೀತಾಸಂದೇಶದ ಮಹತ್ವವು ಎಷ್ಟಿರುತ್ತ ದೆಂಬುದನ್ನು ತಿಳಿಸಿ ಹೇಳಿದೆವು. ಇದರ ಮೇಲಿಂದ, ಇಗಿನ ಕಾಲದಲ್ಲಿ– ಅನೇಕ ವಿಷಯಗಳಲ್ಲಿ ತೀರ ತಪ್ಪು ಹಾದಿಯನ್ನು ಹಿಡಿದಿರುವ ಈಗಿನ ಕಾಲದಲ್ಲಿ–ರಾಜಕೀಯ, ಸಾಮಾಜಿಕ, ನೈತಿಕ ತಪ್ಪುದಾರಿಗಳನ್ನು ತಪ್ಪಿಸಬೇಕಾದರೆ ನಾವು ಕೊಟ್ಟಿರುವ ಗೀತಾಸಂದೇಶವನ್ನು ಚೆನ್ನಾಗಿ ಮನನಮಾಡಿ, ಅದರಲ್ಲಿ ಸಂಕ್ಷೇಪವಾಗಿ ಸೂಚಿಸಿರುವ ಗೀತೆಯ ತತ್ವ ಗಳನ್ನು ಆಯಾ ಸಂದರ್ಭಗಳಲ್ಲಿ ಯೋಗ್ಯ ರೀತಿಯಿಂದ ಅನ್ವಯಿಸಿಕೊ ಳ್ಳುವುದು ಎಷ್ಟು ಅಗತ್ಯವೆಂಬುದು ಗೊತ್ತಾಗುವುದು. ಆ ಪ್ರಕಾರ ವಾಗಿ ಮಾಡುವುದಕ್ಕೆ ಜನರು ಕಿಂಚಿತ್ತಾದರೂ ಪ್ರಯತ್ನಿಸಿದರೆ ಲೇಖ ಕನು ಕೃತಾರ್ಥನಾದನೆಂದು ಭಾವಿಸುವನು.

---

## ೧೬ನೆಯ ಪ್ರಕರಣ

# ಉಪಸಂಹಾರ

### ಗೀತೆಯು ಭಕ್ತಿ-ಜ್ಞಾನ-ಕರ್ಮ ಇವುಗಳ ಮುಪ್ಪುರಿಯ ಯೋಗವು

ಇಲ್ಲಿಯವರೆಗೆ, ನಾವು ಗೀತಾಸಂದೇಶಕ್ಕೆ ಪ್ರತ್ಯಕ್ಷವಾಗಿಯೂ ಅಪ್ರತ್ಯಕ್ಷವಾಗಿಯೂ ಸಂಬಂಧಿಸಿದ ಮುಖ್ಯ ವಿಷಯಗಳನ್ನು ವಿವಿಧ ದೃಷ್ಟಿಯಿಂದ ಸಂಕ್ಷೇಪವಾಗಿ ಚರ್ಚಿಸಿದೆವು. ಇನ್ನು ಈ ಕೊನೆಯ ಪ್ರಕರಣದಲ್ಲಿ, ಆ ಮುಖ್ಯ ಸಂಗತಿಗಳು ವಾಚಕರ ಮನದಲ್ಲಿ ಒಳಿತಾಗಿ ನಿಲ್ಲಬೇಕೆಂಬ ಉದ್ದೇಶದಿಂದ ಅವುಗಳನ್ನು ಕ್ರೋಡೀಕರಿಸಿ ಸ್ವಲ್ಪದರಲ್ಲಿ ಹೇಳುವೆವು.

ನಾವು ಉಪಕ್ರಮ ಪ್ರಕರಣದಲ್ಲಿ, ಗೀತಾಸಂದೇಶವನ್ನರಿಯುವುದು ಎಷ್ಟು ಮಹತ್ವದ್ದಿರುತ್ತದೆಂಬುದನ್ನೂ, ಆ ತರಹದ ಒಟ್ಟು ನೋಟದಿಂದ ಗೀತಾ ತತ್ತ್ವದ ಸಮಗ್ರ ರಚನೆಯು ಹೇಗೆ ತಟ್ಟನೆ ನಮ್ಮ ಮುಂದೆ ನಿಲ್ಲುತ್ತದೆಂಬುದನ್ನೂ ಹೇಳಿದೆವು. ಆ ಬಳಿಕ, ಗೀತೆಯ ಸಂದೇಶದೊಳಗೆ ಅಡಕವಾಗಿರುವ ಒಂದೊಂದೇ ತತ್ವವನ್ನು ತೆಗೆದುಕೊಂಡು, ಗೀತೆಯ ಆಧಾರದಿಂದ ಅವುಗಳನ್ನು ಸಮರ್ಥಿಸಿದೆವು.

ಇವುಗಳ ಒಟ್ಟು ಮಥಿತಾರ್ಥವೇನು ? ಕಪಟನಾಟಕಸೂತ್ರಧಾರನಾದ ಶ್ರೀಪರಮಾತ್ಮನು ತನ್ನ ನಾಟ್ಯರಂಗದೊಳಗಿನ ಮೊದಲಿನ ಮುಖ್ಯ ಪರದೆಯನ್ನೆತ್ತಿದೊಡನೆ ನಮಗೆ ನಾನಾತರಹದ ಜೀವರುಗಳು ದೃಗ್ಗೋಚರವಾಗುತ್ತಾರೆ. ಅವೆಲ್ಲ ಜೀವರುಗಳ ಪ್ರಕೃತಿ ಬೇರೆ, ಸ್ವಭಾವ ಬೇರೆ, ಕರ್ಮ ಬೇರೆ, ಗುಣ ಬೇರೆ. ಪ್ರತಿಯೊಬ್ಬ ಜೀವನೂ ಪರಮಾತ್ಮನು ತನಗೊಪ್ಪಿಸಿದ ಪಾತ್ರವನ್ನು ಚೆನ್ನಾಗಿ ಆಡಿತೋರಿಸುವುದೇ ಆತನ ಮುಖ್ಯ ಕರ್ತವ್ಯ. ಹೀಗೆ ಆತನು ಆಡಿತೋರಿಸುವುದರಿಂದಲೇ ಆತನಿಗೆ ಮುಕ್ತಿ, ಎಂದರೆ, ಈ ನಾಟಕದೊಳಗಿನ ತನ್ನ ಪಾತ್ರವನ್ನು ಮುಗಿಸಿದ ನಂತರ ಪರಮಾತ್ಮನಲ್ಲಿ ಪ್ರವೇಶ. ಮತ್ತು ಅಲ್ಲಿ, ಆ ಜೀವನಿಗೆ ಸ್ವರೂಪಭೂತವಾದ ಆನಂದಪ್ರಾಪ್ತಿ. ಅದೇ ಆತನ ಮುಕ್ತಿ.

ಜೀವನು ಈ ಬಗೆಯಾಗಿ ತನ್ನ ಪಾತ್ರವನ್ನು ಚೆನ್ನಾಗಿ ಆಡಿತೋರಿಸುವುದೆಂದರೇನೇ ಆ ಜೀವನು ಆಚರಿಸತಕ್ಕ ಪರಮಧರ್ಮ. ಪರಮಾತ್ಮನು ತನಗೆ ಕೊಟ್ಟಿರುವ ಆತ್ಮಿಕ ಬೌದ್ಧಿಕ ಮತ್ತು ಶಾರೀರಿಕ ಶಕ್ತಿಗಳನ್ನು ತನ್ನಮಟ್ಟಿಗೆ ಪರಮಾವಧಿಯಾಗಿ ವಿಕಾಸ ಮಾಡಿಕೊಂಡರೆ ತೀರಿತು. ಪ್ರತಿಯೊಬ್ಬ ಜೀವನು ತನ್ನ ಇತಿಕರ್ತವ್ಯತೆಯನ್ನು ಮಾಡಿದಂತಾಯಿತು. ಅದಕ್ಕಿಂತ ಹೆಚ್ಚಿನದೇನನ್ನು ಆತನು ಮಾಡಲಾಪನು ? ಏನೂ ಶಕ್ಯವಿಲ್ಲ. ಪರಮಾತ್ಮನೂ ಕೂಡ, ಜೀವನಿಂದ ಅದಕ್ಕಿಂತ ಹೆಚ್ಚಿನದೇನನ್ನೂ ಅಪೇಕ್ಷಿಸುವುದಿಲ್ಲ. ಅದು ಕಾರಣ, ಅಷ್ಟು ಮಾಡಿದರೆ ಸಾಕು. ತನ್ನ ಸರ್ವಶಕ್ತಿಗಳ ಪೂರ್ಣ ವಿಕಾಸವನ್ನು ಮಾಡಿಕೊಳ್ಳುವುದೇ ಆತನು ಮಾಡತಕ್ಕ ಮುಖ್ಯ ಸಾಧನ. ದೇವರು ಕೊಟ್ಟಿರುವ ವಿವಿಧ ಶಕ್ತಿಗಳ ವಿಕಾಸವನ್ನು ಮಾಡಿ

ಕೊಳ್ಳುವ ಸಾಧನವನ್ನು ಕೈಕೊಳ್ಳುವುದಕ್ಕೆ ಈ ಶರೀರವು ಗರಡೀ
ಮನೆಯು. ಈ ಗರಡೀಮನೆಯಲ್ಲಿ ಸಾಧನಮಾಡಿ ಪ್ರತಿಯೊಬ್ಬನು
ತನ್ನ ಉನ್ನತಿಯನ್ನು ಸಾಧಿಸಿಕೊಳ್ಳಬೇಕೆಂದು ಈಶ್ವರನ ಸಂಕಲ್ಪ.
ಈ ಗರಡೀಮನೆಯಲ್ಲಿ ಸಾಧನಮಾಡದಿದ್ದರೆ ಮನುಷ್ಯನಿಗೆ ಮುಕ್ತಿಯಿಲ್ಲ.
ಕೆಲವು ಕವಿಗಳು ಬಾಲಕರ ಮುಗ್ಧಜೀವನದ ಸುಖವನ್ನು ಸ್ತುತಿಸು
ವದುಂಟು. ಮತ್ತೆ ಕೆಲವರು ಪಶುಪಕ್ಷಿಗಳ ನಲಿದಾಟವನ್ನು ನೋಡಿ
ಆ ತರದ ಆನಂದವನ್ನು ಪೊಗಳುವದುಂಟು. ಮತ್ತೆ ಹಲವರು ಗಿಡ
ಬಳ್ಳಿಗಳ ಪರೋಪಕಾರಮಯವಾದ ಜೀವನ ಸೌಖ್ಯವನ್ನು ಬಯಸುವ
ದುಂಟು. ಆದರೆ, ಇದೆಲ್ಲವೂ ಕವಿಕಲ್ಪನೆ; ಭಾಷಾಲಂಕಾರ. ನಿಜವಾಗಿ
ಅವು ಸತ್ಯಪಧಾನಗಳಲ್ಲ. ಎಷ್ಟೇ ದುಃಖಮಿಶ್ರಿತವಾಗಿದ್ದರೂ ಮಾನವ
ಜೀವನವೇ ಹೆಚ್ಚಿನದು. ಯುದ್ಧಮಾಡಿ ಗೆದ್ದಾಗಿನ ಆನಂದವೇ ನಿಜವಾದ
ಆನಂದ. ನರಜನ್ಮದಲ್ಲಿದ್ದುಕೊಂಡು, ಸಂಸಾರವನ್ನು ಜಯಿಸಿ ಮುಕ್ತಿ
ಯನ್ನು ಪಡೆಯಬೇಕು.

ಈ ಮಾನವಜನ್ಮದಲ್ಲಿ, ಇಂಥ ಸಾಧನೆಯನ್ನು ಮಾಡುವ ಬಗೆ
ಯಾವುದೆಂಬುದನ್ನು ಹೇಳುವುದೇ ಗೀತೆಯ ಉದ್ದೇಶ. ಇಂಥ ಸಾಧನೆ
ಯನ್ನು ಮಾಡುವುದಕ್ಕೆ ಮುಂಚೆ ಬೇಕಾದುದು ಸಂನ್ಯಾಸ ಅಥವಾ
ವೈರಾಗ್ಯಬುದ್ಧಿ. ಮಾನವನು ಭೋಗಮಾರ್ಗವನ್ನು ಬಿಟ್ಟು, ಯೋಗ
ಮಾರ್ಗದ ಕಡೆಗೆ ಹೊರಳಲಿಕ್ಕೆ ಹತ್ತುವುದೇ ಮೊದಲನೆಯ ಹೆಜ್ಜೆ.
ಹಾಗೆ ಯೋಗಮಾರ್ಗದ ಕಡೆಗೆ ಹೋಗುವುದು ಆತನಿಗೆ ಒಮ್ಮೆಲೆ
ಸಾಧ್ಯವಾಗುವುದಿಲ್ಲ. ಆದಕಾರಣ, ಆತನು ಮುಂಚೆ ತ್ಯಾಗ ಮಾರ್ಗವ
ನ್ನವಲಂಬಿಸಬೇಕಾಗುತ್ತದೆ. ಅದರ ಮೂಲಕ, ಇಂದ್ರಿಯಜಯ
ಮನೋಜಯಗಳನ್ನು ಸಂಪಾದಿಸಬೇಕಾಗುತ್ತದೆ. ಈ ತ್ಯಾಗವೆಂಬ
ಚುಕ್ಕಾಣಿಯನ್ನು ಮೆಲ್ಲಮೆಲ್ಲಗೆ ಹೊರಳಿಸಿದಂತೆ, ಆತನು ಯೋಗ
ಮಾರ್ಗದ ಕಡೆಗೆ ಹೊರಳುತ್ತ ಬರುತ್ತಾನೆ. ತ್ಯಾಗ ಅಥವಾ ವೈರಾಗ್ಯ
ಬುದ್ಧಿಯಿಂದುಂಟಾಗುವ ಮನೋಜಯವನ್ನು ಆತನು ಭೋಗವನ್ನು
ಯೋಗ್ಯ ರೀತಿಯಿಂದ ಅನುಭವಿಸುವ ಯುಕ್ತಿಯನ್ನು ಕಲಿಯುವುದಕ್ಕೆ
ಉಪಯೋಗಿಸಬೇಕು. ಇದೇ ಯೋಗವು. ಹಾಗೆ ಆಗುವುದಕ್ಕೆ ಆತನು

ಪರಮಾತ್ಮನಲ್ಲಿ ಅಚಲವಾದ ಶ್ರದ್ಧೆಯನ್ನಿಡಬೇಕಾಗುತ್ತದೆ. ವಿಷಯಸುಖವು ತನ್ನ ಧ್ಯೇಯವಲ್ಲ, ಪರಮಾತ್ಮಪ್ರಾಪ್ತಿಯೂ ಮತ್ತು ಆತ್ಮಸುಖವು ತನ್ನ ಧ್ಯೇಯಗಳು ಎಂಬುದನ್ನು ಸದಾ ಧ್ಯಾನದಲ್ಲಿಡಬೇಕಾಗುತ್ತದೆ. ಇದೇ ಈಶ್ವರಾರ್ಪಣ ಬುದ್ಧಿ ಎನ್ನುವುದು. ಪರಮಾತ್ಮನಲ್ಲಿ ಎಷ್ಟೆಷ್ಟು ಹೆಚ್ಚು ಭಕ್ತಿವಿಶ್ವಾಸಗಳನ್ನು ಇಡುವನೋ ಅಷ್ಟಷ್ಟು ತೀವ್ರ ಆತನಿಗೆ ಇಂದ್ರಿಯಜಯಮನೋಜಯಾದಿಗಳೂ ಸಾಧ್ಯವಾಗುತ್ತವೆ.

ಈ ತರಹದ ಮನಃಸ್ಥಿತಿಯನ್ನು ಸಂಪಾದಿಸಿ ಆತನು ಮಾಡತಕ್ಕದ್ದೇನು ? ಅರ್ಥಾತ್, ತನ್ನ ಸ್ವಭಾವಕ್ಕೆ ತಕ್ಕುದಾದ ಕರ್ಮಗಳನ್ನು ಮಾಡುವುದು. ಅದೇ ಸ್ವವಿಹಿತವೃತ್ತಿ. ಆ ಸ್ವವಿಹಿತವೃತ್ತಿಯನ್ನು ಮಾಡಬೇಕಾದರೆ ಭಕ್ತಿಜ್ಞಾನಗಳು ಅವಶ್ಯ. ಸರ್ವವೂ–ಮೋಕ್ಷವು ಕೂಡ ಭಗವದಧೀನವೆಂಬ ಜ್ಞಾನದಿಂದ ಪರಮಾತ್ಮನಲ್ಲಿದ್ದ ಭಕ್ತಿವಿಶ್ವಾಸಗಳು ದೃಢವಾಗುತ್ತವೆ. ಈ ಬಗೆಯಾದ ಜ್ಞಾನಭಕ್ತಿಗಳಿಂದ ಕೂಡಿದ ಸ್ವವಿಹಿತ ವೃತ್ತಿಯನ್ನಾಚರಿಸುವುದೇ ಮನುಷ್ಯನ ಪರಮಧರ್ಮವು.

ಸಾರಾಂಶ, ಜ್ಞಾನ–ಭಕ್ತಿ–ಕರ್ಮ ಇವು ಒಂದನ್ನೊಂದು ಅವಲಂಬಿಸಿರುತ್ತವೆ. ಕಿಂಚಿತ್ ಭಕ್ತಿ ಕಿಂಚಿತ್ ಜ್ಞಾನದಿಂದ ಮನುಷ್ಯನು ತನ್ನ ಕರ್ತವ್ಯಕರ್ಮವನ್ನು ಕಿಂಚಿತ್ ಪ್ರಾರಂಭಿಸಬೇಕು. ಅಂದರೆ ನಿಷ್ಕಾಮದಿಂದಲೂ ಈಶ್ವರಾರ್ಪಣಬುದ್ಧಿಯಿಂದಲೂ ಕರ್ತವ್ಯಕರ್ಮವನ್ನು ಮಾಡಹತ್ತಬೇಕು. ಮತ್ತು ಅವುಗಳನ್ನು ಒಂದೊಂದನ್ನೇ ಬೆಳೆಸುತ್ತ ಹೋದಂತೆ ಅವುಗಳ ಪರಿಣಾಮವು ಮಿಕ್ಕವುಗಳ ಮೇಲೆಯೂ ಆಗುತ್ತದೆ. ಆತನ ಆಚರಣೆಯಿಂದ ಆತನಲ್ಲಿದ್ದ ಭಕ್ತಿವೈರಾಗ್ಯಗಳು ದಿನದಿನಕ್ಕೆ ವೃದ್ಧಿಂಗತವಾಗುತ್ತ ಹೋಗುತ್ತವೆ. ಸಾರಾಂಶ, ಮುಂಚೆ ಅಂಧ ಭಕ್ತಿ, ಅಪೂರ್ಣಜ್ಞಾನ, ಅಲ್ಪವೈರಾಗ್ಯ ಇವುಗಳಿಂದ ಕರ್ತವ್ಯಕರ್ಮಕ್ಕೆ ಪ್ರಾರಂಭವಾಗುತ್ತದೆ. ಅವು ಪೂರ್ಣವಾಗುವ ಹಾದಿಯನ್ನು ಆತನು ನೋಡುತ್ತ ಕುಳ್ಳಿರುವ ಕಾರಣವಿಲ್ಲ. ಮುಂದೆ, ಅವರವರ ಯೋಗ್ಯತೆಯ ಪ್ರಕಾರ, ಮತ್ತು ಸಾಧನದ ಪ್ರಕಾರ, ಕೆಲವರಲ್ಲಿ ಜ್ಞಾನವು ಬೇಗನೆ ವಿಕಾಸವಾಗಬಹುದು, ಮತ್ತೆ ಕೆಲವರಲ್ಲಿ ಭಕ್ತಿಯು ಬೇಗನೆ ಪರಿಪಕ್ವವಾಗಬಹುದು. ಮತ್ತೆ ಕೆಲವರಲ್ಲಿ ವೈರಾಗ್ಯವು ಬೆಳೆ

ಯಬಹುದು. ಆದರೆ, ಒಂದರ ಪರಿಣಾಮವು ಮತ್ತೊಂದರ ಮೇಲೆ ಆಗದೆ ಮಾತ್ರ ಹೋಗುವುದಿಲ್ಲ. ಮತ್ತು ಕೊನೆಗೆ ಇವೆಲ್ಲವುಗಳ ಪೂರ್ಣ ವಿಕಾಸವಾಗಿ ಮನುಷ್ಯನು ಅಪರೋಕ್ಷ ಜ್ಞಾನಿಯಾಗುತ್ತಾನೆ, ಅಂದರೆ ಎಲ್ಲೆಡೆಯಲ್ಲಿಯೂ ಪರಮಾತ್ಮನನ್ನು ಕಾಣುತ್ತಾನೆ. ಮೊದಮೊದಲು ಆತನ ಕರ್ಮಗಳು ಪೂರ್ಣವಾಗಿ ನಿರ್ದೋಷವಾದವುಗಳಿರುವುದಿಲ್ಲ. ಆದರೆ, ಹೆದರುವ ಕಾರಣವಿಲ್ಲ.

ಇದರಿಂದ, ಗೀತೆಯು ಭಕ್ತಿ–ಜ್ಞಾನ–ಕರ್ಮ ಈ ಮೂರು ಮಾರ್ಗಗಳಿಂದ ಕೂಡಿದ ಮುಪ್ಪುರಿಯ ಯೋಗವೆಂಬುದು ಗೊತ್ತಾಗುವುದು. ಜಗತ್ತಿನಲ್ಲಿ ಹೇಗೆ ಪ್ರತಿಯೊಂದು ವಸ್ತುವು ಯಾವಾಗಲೂ ಸತ್ತ್ವರಜತಮಗಳಿಂದ ಕೂಡಿಯೇ ದೊರೆಯುತ್ತದೆಯೋ ಹಾಗೆ, ಭಕ್ತಿ–ಜ್ಞಾನ–ಕರ್ಮ ಇವು ಯಾವಾಗಲೂ ಕೂಡೇ ಇರುತ್ತವೆ. ಅವು ಮುಂಚೆ ಪಕ್ವವಾಗಿರುವುದಿಲ್ಲ. ಬರಬರುತ್ತ ಹೆಚ್ಚಿಗೆ ಪರಿಪಕ್ವವಾಗುತ್ತ ಹೋಗುತ್ತವೆ. ಆದಕಾರಣವೇ ಗೀತೆಯ ಯೋಗಕ್ಕೆ ಭಕ್ತಿ-ಜ್ಞಾನ–ಕರ್ಮ ಇವುಗಳ ಮುಪ್ಪುರಿಯ ಯೋಗವೆಂದು ನಾವು ಕರೆಯುತ್ತೇವೆ.

ಕೊನೆಗೆ ಅತಿಪರಿಪಕ್ವವಾದ ಭಕ್ತಿಯೋಗವೇ ಮೋಕ್ಷ ಸಾಧನವಾಗುತ್ತದಲ್ಲದೆ, ಕೇವಲ ಅಪರೋಕ್ಷಜ್ಞಾನವು ಅಂದರೆ ಭಗವದ್ದೃಷ್ಟಿಯು ಸಾಧನವಲ್ಲ. ಭಗವದ್ದೃಷ್ಟಿಯು ಅಥವಾ ಅಪರೋಕ್ಷಜ್ಞಾನವು ಅತಿ ಪರಿಪಕ್ವ ಭಕ್ತಿಯೋಗಕ್ಕೆ ಸಾಧನವು. ಆದಕಾರಣವೇ ಅದು ಮೋಕ್ಷಕ್ಕೆ ಸಾಧನವೆಂದು ಹೇಳಲ್ಪಡುತ್ತದೆ. ಇನ್ನು ಭಗವದ್ದೃಷ್ಟಿಗೆ ಪರಿಪಕ್ವ ಭಕ್ತಿಯೋಗವು ಸಾಧನವು, ಕೇವಲ ಧ್ಯಾನವು ಸಾಧನವಲ್ಲ. ಧ್ಯಾನವು ಪರಿಪಕ್ವ ಭಕ್ತಿಯೋಗಕ್ಕೆ ಸಾಧನವು. ಆದಕಾರಣವೇ ಅದು ಭಗವದ್ದೃಷ್ಟಿಗೆ ಸಾಧನವೆಂದೆನ್ನಿಸಲ್ಪಡುತ್ತದೆ. ಅದೇ ಪ್ರಕಾರ ಪಕ್ವಭಕ್ತಿಯೋಗವೇ ಜ್ಞಾನಸಾಧನವು, ಅಲ್ಲದೆ ಶ್ರವಣಮನನಾದಿಗಳು ಸಾಧನಗಳಲ್ಲ. ಅವು ಆ ಪಕ್ವಭಕ್ತಿಯೋಗಕ್ಕೆ ಸಾಧನಗಳಾದ್ದರಿಂದಲೇ ಧ್ಯಾನಕ್ಕೆ ಸಾಧನಗಳೆಂದೆನ್ನಿಸಲ್ಪಡುತ್ತವೆ. ಸಾರಾಂಶ, ಕೆಳಗೆ ಕಾಣಿಸಿದುದೇ ಸಾಧನ ಸೋಪಾನ ಪರಂಪರೆಯು.




ಇವೆಲ್ಲವುಗಳೊಡನೆ ಸ್ವವಿಹಿತವೃತ್ತಿಯಂತೂ ಬೇಕೇಬೇಕು. ಇದೇ ಗೀತೆಯ ಪರಮಧರ್ಮದ ಸಾರವು. ಮನುಷ್ಯನು ಅಪರೋಕ್ಷಜ್ಞಾನಿಯಾದ ಬಳಿಕ ಕೂಡ ಭಕ್ತಿಯೂ ಕರ್ಮವೂ ಜ್ಞಾನವೂ ಬೇಕೇಬೇಕೆಂದು ಕೆಲವರೂ ಭಕ್ತಿಯೊಂದೇ ಸಾಕೆಂದು ಕೆಲವರೂ ಜ್ಞಾನವೊಂದೇ ಸಾಕೆಂದು ಕೆಲವರೂ ಹೇಳುತ್ತಾರೆ. ಅದು ವಾದಗ್ರಸ್ತವಿಷಯವು. ಅದು ಈಗ ನಮಗೆ ಕರ್ತವ್ಯವಲ್ಲ. ಮನುಷ್ಯನು ಅಪರೋಕ್ಷಜ್ಞಾನಿಯಾಗುವ ವರೆಗೆ, ಸ್ಥೂಲಮಾನದಿಂದ ಹೇಳುವುದಾದಲ್ಲಿ, ಎಲ್ಲರ ದಾರಿಯೂ ಒಂದೇ ಎಂದು ಹೇಳಲು ಅಡ್ಡಿ ಇಲ್ಲ.

ಆಯಾ ಆಚಾರ್ಯರು ಗೃಹಿತವಾಗಿ ತೆಗೆದುಕೊಳ್ಳುವ ಮೂಲ ತತ್ವಗಳ ಮೇರೆಗೆ, ಅವರ ಕೊನೆಯ ಸಿದ್ಧಾಂತಗಳಲ್ಲಿ ಭೇದವಾಗಿರುತ್ತದೆಂದು ನಮ್ಮ ಅಭಿಪ್ರಾಯ. ಅದೇ ಮೇರೆಗೆ, ಆಯಾ ಆಚಾರ್ಯರು ಹಿಡಿದುಕೊಂಡ ತತ್ವಗಳಿಗನುಸಾರವಾಗಿ, ಪ್ರತಿಯೊಬ್ಬ ಆಚಾರ್ಯರೂ ತರ್ಕಶುದ್ಧವಾಗಿಯೇ ಸಿದ್ಧಾಂತಗಳನ್ನು ತೆಗೆದಿರುವರೆಂದೂ ಅವರ ವಿಚಾರಸರಣಿಯಲ್ಲಿ ವಿಶೇಷವಾದ ಸಂದುಗಳಿಲ್ಲವೆಂದೂ, ಆದಕಾರಣ, ಅವರನ್ನು ನಡುವೆ ಖಂಡನ ಮಾಡುವುದು ಸುಲಭಸಾಧ್ಯವಲ್ಲವೆಂದೂ ನಮಗೆ ತೋರುತ್ತದೆ. ಭೇದವುಂಟಾಗುವುದು ಮುಖ್ಯತಃ ಗೃಹಿತವಾಗಿ

ತೆಗೆದುಕೊಳ್ಳುವ ಮೂಲ ತತ್ತ್ವಗಳಲ್ಲಿ. ಸಾಮಾನ್ಯ ಜನರು ಆ ಮತಭೇದ ಗಳನ್ನು ಲಕ್ಷ್ಯದಲ್ಲಿಟ್ಟುಕೊಂಡರೆ ಸಾಕು. ಅಪರೋಕ್ಷ್ಯಜ್ಞಾನಕ್ಕೆ ಮುಟ್ಟುವ ವರೆಗೆ ಅವರೆಲ್ಲರೂ ಸಾಮಾನ್ಯವಾಗಿ ನಾವು ಈ ಗೀತಾ ಸಂದೇಶದಲ್ಲಿ ತೋರಿಸಿರುವ ಮಾರ್ಗದಲ್ಲಿ ಹೋಗಲು ಯಾವ ಪ್ರತ್ಯ ವಾಯವೂ ಇರುವುದಿಲ್ಲ.

ಮುಖ್ಯವಾಗಿ ಹೇಳುವುದೇನೆಂದರೆ—ಮಾನವನು ಆಕಳ ಕರುವಿ ನಂತೆ ಪರಮಾತ್ಮನ ಕಡೆಗೆ ಧಾವಿಸುವುದಕ್ಕೆ ಹಂಬಲಿಸಬೇಕು. ಆಗ, ಪರಮಾತ್ಮನು ಕೈಚಾಚಿ ಭಕ್ತನನ್ನು ತನ್ನ ಕಡೆಗೆ ಕರೆದುಕೊಳ್ಳುವನು. ಕೂಸು ತಾಯಿಯನ್ನಪ್ಪಿಕೊಳ್ಳುವುದಕ್ಕೆ ಹಂಬಲಿಸಬೇಕು. ಆಗ ತಾಯಿಯು ಮಗುವನ್ನಪ್ಪಿಕೊಂಡು ಮುದ್ದಿಡುವಳು. ಈ ಗೀತಾ ಸಂದೇಶದ ವಾಚನದಿಂದ ಸರ್ವರಿಗೂ ಆ ಪ್ರಕಾರದ ಸುಬುದ್ಧಿಯುಂಟಾಗಿ ಅವರು ಸಂದೇಶದಲ್ಲಿ ಹೇಳಿದ ಸಾಧನಮಾರ್ಗವನ್ನು ಕೈಕೊಂಡು ಮುಕ್ತಿಯನ್ನು ಪಡೆಯುವ ಮಾರ್ಗಕ್ಕೆ ಹತ್ತಿ ಕೃತಕೃತ್ಯರಾಗಬೇಕೆಂ ಬುದೇ ಕೊನೆಯ ಕೋರಿಕೆ.

॥ ಶ್ರೀಕೃಷ್ಣಾರ್ಪಣಮಸ್ತು ॥

# ಗೀತಾಸಂದೇಶ

## ವಿಷಯಕೋಶ (Index)

---